ಮಿಲೇಟಸ್ ನಗರದ ಅಲೆಮಾರಿ ಮುದುಕ

# ಥೇಲೀಸ್

ವಿ.ಎಸ್.ಎಸ್.ಶಾಸ್ತ್ರಿ

ಚಿತ್ರ ಕಲಾವಿದ - ಶಿವಣ್ಣ ಜಿ ಕೆ



ಮಕ್ಕಳ ನಾಟಕ

# ಅಲೆಮಾರಿ ಮುದುಕ ಥೇಲೀಸ್

ಡಾ. ನಿಂಗು ಸೊಲಗಿ

ಮಹಾ ಮೇದಾವಿ ಗಣಿತ ಶಾಸ್ತ್ರಜ್ಞ ಥೇಲಿಸ್ ಅವರ
ವಿಶಿಷ್ಟ ಬದುಕಿನ ಕಥಾವಸ್ತುವನ್ನೊಳಗೊಂಡ ನಾಟಕ

ಚಿತ್ರ ಕಲಾವಿದ

**ಶಿವಣ್ಣ ಜಿ ಕೆ**



ಭಾರತ ಜ್ಞಾನ ವಿಜ್ಞಾನ ಸಮಿತಿ–ಕರ್ನಾಟಕ
**Bharat Gyan Vigyan Samiti - Karnataka**
ಬೆಂಗಳೂರು • Bengaluru

*Alemari Muduka Thales*
by Dr Ningu Solagi

*Illustration*
Shivanna GK

*Cover Design*
Shivanna GK

*Layout Design*
Murali K, Print Hut

*First Edition* October 2020

*Print run* 3000

*Price* 70 INR



*Printed at*
Print Hut
Govindarajnagar, Bengaluru

*Published by*
Bharat Gyan Vigyan Samiti (BGVS) - Karnataka
Second Floor, Old Chemical Engineering Building
Indian Institute of Science, Bengaluru 560 012
bgvskarnataka@gmail.com



ಪ್ರಿಯ ಓದುಗರೇ,

ಥೇಲೀಸ್ (THAY-leez or Thales) ಒಬ್ಬ ಗ್ರೀಕ್ ಗಣಿತಶಾಸ್ತ್ರಜ್ಞ, ಖಗೋಳಶಾಸ್ತ್ರಜ್ಞ ಮತ್ತು ಸಾಕ್ರಟೀಸ್‌ಗಿಂತಲೂ ಹಿಂದಿನ ತತ್ವಶಾಸ್ತ್ರಜ್ಞನೂ ಹೌದು. ಆತ ಸುಮಾರು ಕ್ರಿಸ್ತ ಪೂರ್ವ 624 ರಿಂದ ಕ್ರಿಸ್ತ ಪೂರ್ವ 548 ರ ನಡುವೆ ಗ್ರೀಸ್ ದೇಶದ ಮಿಲೇಟಸ್‌ನಲ್ಲಿ ಬದುಕಿದ್ದ. ಅರಿಸ್ಟಾಟಲ್ ಮೊದಲಾದ ಅನೇಕರು ಆತನನ್ನು ಗ್ರೀಕ್ ಪರಂಪರೆಯ ಮೊದಲ ತತ್ವಶಾಸ್ತ್ರಜ್ಞ ಎಂದು ಕರೆದಿದ್ದಾರೆ.

ಪುರಾಣಗಳ ಮೂಲಕ ಜಗತ್ತನ್ನು ಮತ್ತು ವಿಶ್ವವನ್ನು ನೋಡುವ ವಿಧಾನವನ್ನು ಮುರಿದ ಮೊದಲಿಗ ಎಂದು ಥೇಲೀಸ್‌ನನ್ನು ಗುರುತಿಸುತ್ತಾರೆ. ಪ್ರಕೃತಿಯಲ್ಲಿ ಕಂಡುಬರುವ ವಸ್ತು ಮತ್ತು ವಿಚಾರಗಳನ್ನು, ನೈಸರ್ಗಿಕ ಸಿದ್ಧಾಂತ ಮತ್ತು ಕಲ್ಪನೆಗಳ ಮೂಲಕ ನೋಡುವ ವಿಧಾನವನ್ನು ಆತ ಆಧುನಿಕ ವಿಜ್ಞಾನಕ್ಕೂ ಪೂರ್ವದಲ್ಲಿ ಆತ ಪ್ರಾರಂಭಿಸಿದ. ರೇಖಾಗಣಿತದ ಬಳಕೆಯ ಮೂಲಕ ಪಿರಮಿಡ್‌ನ ಎತ್ತರ ಕಂಡುಹಿಡಿಯುವುದು, ಸಮುದ್ರ ತೀರದಿಂದ ಹಡಗು ಇರುವ ದೂರವನ್ನು ಕಂಡುಹಿಡಿಯುವುದು, ಮೊದಲಾದವುಗಳನ್ನು ಥೇಲೀಸ್ ಗಣಿತಶಾಸ್ತ್ರದಲ್ಲಿ ಬಳಕೆಗೆ ತಂದ. ರೇಖಾಗಣಿತದಲ್ಲಿ ತಾರ್ಕಿಕ ವಿಧಾನಗಳನ್ನು ಬಳಕೆಗೆ ತಂದವರಲ್ಲಿ ಆತ ಮೊದಲಿಗನೂ ಹೌದು.

ಕನ್ನಡ ಭಾಷೆಯಲ್ಲಿ ಗಣಿತಶಾಸ್ತ್ರಕ್ಕೆ ಸಂಬಂಧಿಸಿದ ನಾಟಕಗಳು ಅಪರೂಪ. ಈ ಮೂಲನಾಟಕದಲ್ಲಿ ಡಾ. ನಿಂಗು ಸೊಲಗಿಯವರು ಥೇಲೀಸ್‌ನ ವಿಚಾರಗಳನ್ನು ನಮಗೆ ತಿಳಿಸುತ್ತಾರೆ ಮತ್ತು ಈ ನಾಟಕ ಅಭಿನಯದ ಮೂಲಕ ರಂಗರೂಪಕ್ಕೆ ಇಳಿಸಲು ಬಹು ಉಪಯುಕ್ತವಾಗಿದೆ. ಈ ನಾಟಕವನ್ನು ಮಕ್ಕಳು, ಶಿಕ್ಷಕರು ಅಥವಾ ರಂಗಾಸಕ್ತರು ಆಡಿ ತೋರಿಸಲು ಸಾಧ್ಯವಾದರೆ ಕೃತಿಕಾರರು ಮತ್ತು ಪ್ರಕಾಶಕರಾದ ನಮ್ಮ ಶ್ರಮ ಸಾರ್ಥಕ ಎಂದುಕೊಳ್ಳುತ್ತೇವೆ.

**ಪ್ರಕಟಣಾ ಉಪ ಸಮಿತಿ**
ಭಾರತ ಜ್ಞಾನ ವಿಜ್ಞಾನ ಸಮಿತಿ, ಕರ್ನಾಟಕ

ಡಾ.ನಿಂಗು ಸೊಲಗಿ ಇವರು ಕರ್ನಾಟಕದ ಗದಗ ಜಿಲ್ಲೆ, ಮುಂಡರಗಿ ತಾಲೂಕಿನಲ್ಲಿ ಮುಖ್ಯಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಅವರೊಬ್ಬ ಕವಿ, ಬರಹಗಾರ, ನಾಟಕಕಾರ, ಹಾಡುಗಾರ ಮಾತ್ರವಲ್ಲದೆ ರಂಗಕಲಾವಿದರೂ ಕೂಡ. ಇವರು ತಮ್ಮ ಶಿಕ್ಷಕ ವೃತ್ತಿಯಲ್ಲಿ ಕಲೆಯನ್ನು ಸಮರ್ಥವಾಗಿ ಬಳಸುತ್ತಾರೆ. ಇವರು ಮಕ್ಕಳಿಗಾಗಿ ಹಲವಾರು ಹಾಡುಗಳನ್ನೂ ರಚಿಸಿದ್ದಾರೆ.

ಶಿವಣ್ಣ ಜಿ.ಕೆ. ಅವರು ತಮ್ಮ ಸರ್ಕಾರಿ ವೃತ್ತಿಜೀವನದ ಒಟ್ಟು 18 ವರ್ಷಗಳಲ್ಲಿ 15 ವರ್ಷಗಳು ಸಾರ್ವಜನಿಕ ಶಿಕ್ಷಣ ಇಲಾಖೆಯು ಹೊರತರುತ್ತಿರುವ ಶಿಕ್ಷಣವಾರ್ತೆ ಶೈಕ್ಷಣಿಕ ಮಾಸಪತ್ರಿಕೆಯ ವಿನ್ಯಾಸಕರಾಗಿ ಕಲಾವಿದರಾಗಿ ಕೆಲಸ ಮಾಡಿ ನಿವೃತ್ತರಾಗಿದ್ದಾರೆ. ಶಿವಣ್ಣ ಅವರು ತಮ್ಮ ವಿಶಿಷ್ಟ ರೇಖಾಚಿತ್ರಗಳಿಂದ ಪ್ರಸಿದ್ದರಾಗಿದ್ದಾರೆ. ಪ್ರಜಾವಾಣಿ, ಉದಯವಾಣಿ, ಸುಧಾ, ತರಂಗ ಪತ್ರಿಕೆಗಳಲ್ಲಿ ಇವರ ಚಿತ್ರಗಳು ಪ್ರಕಟಗೊಂಡಿವೆ.

# ದೃಶ್ಯ–1

(ಥೇಲೀಸ್ ರೂಪವನ್ನೇ ಹೋಲುವ ಅಜ್ಜನೊಬ್ಬ 'ಕತ್ತೆಮೇಲೆ' ಎಣ್ಣೆ ಕ್ಯಾನುಗಳನ್ನು ಹೇರಿಕೊಂಡು ಹೋಗುತ್ತಿರುವ ಚಿತ್ರ ಬಿಡಿಸುತ್ತಿದ್ದಾನೆ. ಎಂಟ್ಹತ್ತು ಕಿಲಾಡಿ ಮಕ್ಕಳು ನಿಧಾನವಾಗಿ ಹೆಜ್ಜೆ ಹಾಕುತ್ತ ಅಜ್ಜನ ಹತ್ತಿರಕ್ಕೆ ಬಂದು ತನ್ಮಯತೆಯಿಂದ ಚಿತ್ರ ಬಿಡಿಸುತ್ತಿರುವ ಅಜ್ಜನನ್ನು ಬೆಚ್ಚಿ ಬೀಳಿಸಲು ಒಮ್ಮೆಲೆ ಚೀರುತ್ತಾರೆ. ಬಿಚ್ಚಿಬಿದ್ದ ಅಜ್ಜ ಸುಧಾರಿಸಿಕೊಳ್ಳುತ್ತ ಏನೂ ಆಗದವನಂತೆ ಮಕ್ಕಳನ್ನು ದುರುಗುಟ್ಟಿಕೊಂಡು ನೋಡುತ್ತಾನೆ. ಮಕ್ಕಳು ಭಯದಿಂದ ಹಿಂದೆ ಸರಿಯುತ್ತಾರೆ. ಮುಗುಳ್ನಗುತ್ತಾನೆ. ಮಕ್ಕಳು ತಾವೂ ನಗುತ್ತ ಸಲಗೆಯಿಂದ ಅಜ್ಜನ ಹತ್ತಿರಕ್ಕೆ ಹೋಗುತ್ತಾರೆ.)

ಮಗು 1 : ಏನ್ ಮಾಡ್ತಾ ಇದ್ದಿ ಅಜ್ಜ....

ಅಜ್ಜ : ಕತ್ತೆ ಕಾಯ್ತಾ ಇದ್ದೀನಿ.

ಮಗು 2 : ನೋಡಿದರೆ ಗೊತ್ತಾಗುತ್ತೆ

ಮಗು 3 : ಹಾಗಲ್ಲ ಅಜ್ಜ ಈಗ.. ನೀನು.. ಏನ್ಮಾಡ್ತಾ ಇದ್ದೀಯಾ.... ಅಂತ.

ಅಜ್ಜ : ಅಯ್ಯೋ ನಿಮ್ಮ ಮನೆಕಾಯ ಹೋಗ..... ಚಿತ್ರ ಬರೀತಾ ಇದ್ದದ್ದು ಕಾಣ್ತಾ ಇಲ್ವೆ.....

ಮಗು 4 : ಲೇ..... ಈ ಅಜ್ಜ ಕತ್ತೆಗಳ ಚಿತ್ರ ಬರೀತಾ ಇದ್ದಾನೆ.

ಮಗು 1 : ಅಜ್ಜ ನಿನಗೆ ಕುದುರೆ ಚಿತ್ರ ಬರೆಯೋಕೆ ಬರುತ್ತಾ....?

ಅಜ್ಜ : ಕತ್ತೆದೂ, ಕುದುರೇದು, ನಿಂದು ನಿಮ್ಮಜ್ಜನದು ಎಲ್ಲ ಚಿತ್ರ ಬರೆಯೋಕೆ ಬರುತ್ತೆ ಯಾಕೆ?

ಮಗು 1 : ನಮ್ಮಜ್ಜನ ಚಿತ್ರ ಇಲ್ಲಿ ಈಗಾಗಲೆ ಬರೆದಾಗಿದೆಯಲ್ಲ.....

ಅಜ್ಜ : ಯಾವುದು..... ಇದಾ (ಕತ್ತೆಗಳ ಹಿಂದೆ ಸಾಗುತ್ತಿರುವ ಥೇಲೀಸ್ ಚಿತ್ರ ತೋರಿಸುತ್ತ) ಇದು ನನ್ನ ಚಿತ್ರ ಅಲ್ಲ ಮಗ.....

ಎಲ್ಲರೂ : ಆಶ್ಚರ್ಯದಿಂದ ಮತ್ತೆ.......

ಅಜ್ಜ : ಇದು ಥೇಲೀಸ್ ಅಂತ ಮಹಾ ಮೇಧಾವಿಯ ಚಿತ್ರ ಗಣಿತ ಶಾಸ್ತ್ರಜ್ಞನೀತ.

ಮಗು 3 : ಮತ್ತೆ ಕತ್ತೆ ಕಾಯ್ತಾ ಇದ್ದಾನೆ.

ಮಗು 2 : ಏಯ್ ಅವನು ಕತ್ತೆ ಕಾಯ್ತಾ ಇಲ್ಲ, ಕತ್ತೆಗಳ ಬೆನ್ನ ಮೇಲೆ ಎಣ್ಣೆ ಕ್ಯಾನುಗಳನ್ನು ಹೇರಿಕೊಂಡು ವ್ಯಾಪಾರಕ್ಕೆ ಹೊರಟಿದ್ದಾನೆ.

ಮಗು 5 : ನಿನಗೆ ಹ್ಯಾಗಪ್ಪ ಗೊತ್ತು ಅವನು ಎಣ್ಣೆ ವ್ಯಾಪಾರಕ್ಕೆ ಹೊರಟಿದ್ದಾನೆ ಅಂತ?

ಮಗು 2 : ಒಂದು ಸಾರಿ ಈ ಅಜ್ಜ... ಥೇಲೀಸ್‌ನ ಬಗೆಗೆ ಒಂದು ಕಥೆ ಇದೆ ಓದಿ ಅಂತ ಒಂದು ಪುಸ್ತಕ ಕೊಟ್ಟಿದ್ದ, ನಾನು ಅದರಲ್ಲಿ ಈ ಬಗ್ಗೆ ಓದಿದ್ದೆ.

ಮಗು 5 : ಅಜ್ಜ ನಮಗೂ ಆ ಕಥೆ ಪುಸ್ತಕ ಕೊಡು ಅಜ್ಜ.

ಮಗು 4 : ಕೊಡು ಅಜ್ಜ.

ಅಜ್ಜ : ನನ್ನಲ್ಲಿರೋದು ಒಂದೇ ಪುಸ್ತಕ ಅದನ್ನು ಯಾರಿಗೆ ಅಂತ ಕೊಡಲಿ...

ಮಗು 3 : ಅಜ್ಜ ಒಂದು ಐಡಿಯಾ.

ಮಗು 1 : ಏನಪ್ಪ ಅದು ಐಡಿಯಾ.

ಮಗು 3 : ಎಲ್ಲರಿಗೂ ತಿಳಿಯೋ ಹಾಗೆ ಈ ಅಜ್ಜನೇ ಥೇಲೀಸ್‌ನ ಕಥೆ ಹೇಳುವುದು

ಮಗು 2 : ಇನ್ನೊಂದು ಐಡಿಯಾ......





ಎಲ್ಲರೂ : ಏನಪ್ಪ ಅದು .....

ಮಗು 2 : ಅಲೆಮಾರಿ ಅಜ್ಜ ಥೇಲೀಸ್ ಥೇಟ್ ಈ ಅಜ್ಜನ ಥರಾನೇ ಇದ್ದ, ಮೀಸೆ ಬೋಳಿಸಿದ, ಬೆಳ್ಳಂ ಬಿಳಿ ಮುಖ, ನೀಳವಾದ ಗಡ್ಡ.... ನೀಲಿ ಕಣ್ಣು, ಕೈಯಲ್ಲೊಂದು ಊರುಗೋಲು.... (ಅಜ್ಜ ಮಗು ವರ್ಣಿಸುತ್ತಿದ್ದಂತೆ ಮುಖ ಮುಚ್ಚಿಕೊಂಡು ಗಡ್ಡ ನೀವಿಕೊಂಡು, ಕೋಲು ಊರಿ ಠೀವಿಯಿಂದ ನಿಂತು ಮಗುವಿನ ಮಾತಿಗೆ ಪೂರಕವಾದ ಭಾವಗಳನ್ನು ಅಭಿವ್ಯಕ್ತಿಸುತ್ತ ಸಂಭ್ರಮಿಸುತ್ತಾರೆ)

ಮಗು 5 : ಇದ್ರೆ.... ಏನ್ಮಾಡಬೇಕೀಗ ಅಜ್ಜನ್ನ ನೋಡಿ ಬಿಟ್ರೆ ಕಥೆ ಕೇಳ್ದಂಗೆ ಆಗ್ತದಾ.... ಅವನ ಗಣಿತದ ತರ್ಕ ತಿಳಿದಂಗ ಆಗ್ತದಾ...

ಮಗು 2 : ಸ್ವಲ್ಪ ತಾಳ ಲೇ.... ನಾನು ಹೇಳ್ತಿರೋದು ಹಾಗಲ್ಲ.....

ಮಗು 5 : ಮತ್ತೆ...?

ಮಗು 2 : ಥೇಲೀಸ್ ಅಜ್ಜನ ಹಾಗೇ ಇರೋ ಈ ಅಜ್ಜ ಥೇಲೀಸ್‌ನ ಪಾತ್ರವಾಗಲಿ...........

ನಾವು ಮಕ್ಕಾಳಾಗೋಣ.... ಬೇರೆ ಬೇರೆ ಪಾತ್ರಗಳಾಗಿ ಮಾತಾಡೋಣ... ಆಗ ಈ 'ಅಲೆಮಾರಿ ಮುದುಕ ಥೇಲೀಸ್' ನಾಟಕಾ ಆಗಿ ಬಿಡುತ್ತೆ. ನಮ್ಮ ಜೊತೆ ಇಲ್ಲಿ ಕುಳಿತಿರೊ ಈ ಜನರೆಲ್ಲ ನೋಡಿ ಸಂತಸ ಪಡಬಹುದು....... ಏನಂತೀರಿ.....

ಎಲ್ಲರೂ : ಹೊ.....

ನಾನಂತೂ ರೆಡಿ.....

ನಾನು ರೆಡಿ....

ಮಗು 2 : ನೋಡೋಕೆ ನೀವು ರೆಡಿನಾ .... (ಪ್ರೇಕ್ಷಕರತ್ತ......)

(ಪ್ರೇಕ್ಷಕರ ಕಡೆಯಿಂದ "ಹೋ... ನಾವಂತೂ ರೆಡಿ" ಎನ್ನುತ್ತ ಕಣಿ ಹೇಳುವ ಚೆನ್ನಿ ಮುನ್ನಿ ರಂಗದ ಆಚೀಚೆಯಿಂದ ಹಾಡುತ್ತ ಪ್ರವೇಶಿಸುವರು.)

ಮುನ್ನಿ : ಬಾರೆ ಚೆನ್ನಿ ಹೋಗೋಣ ಕಣಿ ಹೇಳಾಕ

ಚೆನ್ನಿ : ಬಾರೆ ಮುನ್ನಿ ಹೋಗೋಣ ನಾಟಕಾ ನೋಡಾಕ

ಮುನ್ನಿ ಚೆನ್ನಿ : ಕಣಿಗಿಣಿ ಹೇಳಿಕೊಂಡು ಊರುಕೇರಿ ಸುತ್ತಿಕೊಂಡು ಸೀಮೆದಾಟಿ ಹೋಗೋಣ ಬಾ...ರಾ.

ಮುನ್ನಿ : ಏಯ್ ಚೆನ್ನಿ ಅಕ್ಕ. ಕಣಿ ಹೇಳೂದು ಬಿಟ್ಟು ನಾಟಕಾ ನೋಡಾಕ ಕುಂದರ್ರಿಯಾ...

ಚೆನ್ನಿ : ಬಾ ಮುನ್ನಿ ನೋಡೂಣು.... ಕಣಿ ಹೇಳೂದು ಇದ್ದ ಇರ್ರೈತಿ... ಇಲ್ಲೊಬ್ಬ ಗಣಿತದ ಗಣಿ ಇದ್ದವನ ಕಥಿನ ನಾಟಕಾ ಮಾಡಾಕ್ಹತ್ಯಾರ ಬಾ..... ನೋಡಿ ಹೋಗೂಣು..

ಮುನ್ನಿ : ಹಾಗಂತ್ತೀಯಾ... ಸರಿ ಅಕ್ಕ, ನಡಿ ನೋಡೂಣು.

(ಹಾಡುತ್ತ ಒಳಗೆ ಹೋಗುವರು)

## ದೃಶ್ಯ-2

(ಕಟ್ಟೆಯ ಮೇಲೆ ಥೇಲೀಸ್ ಏನೊ ಎಣಿಕೆ ಹಾಕುತ್ತ, ಯೋಚಿಸುತ್ತ ಬಟ್ಟೆ ಮೇಲೆ ರೇಖಾಕೃತಿಗಳನ್ನು ಬರೀತಾ ಕುಳಿತಿದ್ದಾನೆ. ಮಕ್ಕಳು ಜಗ್ಗಲಗಿ ಅಥವಾ ಸಾಮಾನ್ಯ ಹಲಗೆ ನುಡಿಸುತ್ತ, ತಾಳಕ್ಕೆ ತಕ್ಕಂತೆ ನಾಲ್ವರು ಕೋಲು ಹಾಕುತ್ತ, ಮೂವರು ಲಾಟಿ ಬೀಸುತ್ತ ಪ್ರವೇಶಿಸುವರು.)

ಥೇಲೀಸ್ : ಏನ್ರಪ್ಪ... ಮಜಲು ತುಂಬಾ ಜೋರಾಗಿದೆ.

ಮಗು1 : ಹೌದಜ್ಜ ಜೋರಾಗೆ ಇದೆ. ಬಾರಜ್ಜ ಕುಣಿಯೋಣ....

ಥೇಲೀಸ್ : ಕುಣಿಯೋದ.... ಒಲ್ಲೆಪ್ಪ ... ನನಗೆ ಕುಣಿತಾ ಆಗೋಲ್ಲ.

ಮಗು2 : ಹೌದಜ್ಜ ನಿನಗೆ ಕುಣಿತ ಆಗಲ್ಲ... ರೇಖಾಗಣಿತ-ಗುಣಿತ ಆಗುತ್ತೆ ಅಂತ ನಮಗೆ ಗೊತ್ತು.

ಥೇಲೀಸ್ : (ನಗುತ್ತ ಗಡ್ಡ ನೀವಿಕೊಳ್ಳುತ್ತ) ಮತ್ತೆ ....

ಮಗು 3 : ಮೊದಲು ಕುಣಿತ ಆಮೇಲೆ ಗಣಿತ ಬಾ...

(ಮಕ್ಕಳ ಒತ್ತಾಯಕ್ಕೆ ಮಣಿದು ಥೇಲೀಸ್ ಅಜ್ಜ ಕುಣಿಯುವನು. ನಂತರ ಸುಸ್ತಾಗಿ ಕೂಡುವನು. ಮಕ್ಕಳೂ ಕುಣಿತ ನಿಲ್ಲಿಸಿ ಹಾಗೆ ನಿಲ್ಲುವರು.)

ಮಗು 1 : ಯಾಕಜ್ಜ ಸಾಕಾಯ್ತಾ.

ಥೇಲೀಸ್ : ಸಾಕಾಯ್ತು ಮಕ್ಳ... ಇಲ್ಲಿ ಬನ್ನಿ....

ಮಗು 2 : ಯಾಕಜ್ಜ ?



(ಮಕ್ಕಳು ಕೇಳುತ್ತಿದ್ದಂತೆ ಬ್ಯಾಗಿನಲ್ಲಿ ಮಡಿಚಿಟ್ಟುಕೊಂಡಿದ್ದ ವಿಭಿನ್ನ ರೇಖಾಕೃತಿಗಳನ್ನು ಬರೆದ ಬಟ್ಟೆಗಳನ್ನು ತೆಗೆಯುತ್ತ, ಮಕ್ಕಳಿಗೆ ವಿವರಣೆ ನೀಡುವನು)

ಥೇಲೀಸ್ : ಒಂದಿಷ್ಟು ಪ್ರಶ್ನೆ ಉಂಟು .... ಉತ್ತರಾ ನಿಮಗೇನಾದ್ರೂ ಗೊತ್ತಾ ಅಂತ ನೋಡಬೇಕು ಅಷ್ಟೆ.

ಮಗು 3 : ಬರೀ ದೊಡ್ಡವರೇ ಪ್ರಶ್ನೆ ಕೇಳಿದರೆ, ನಮ್ಮ ಪ್ರಶ್ನೆಗೆ ಉತ್ತರಿಸುವವರಾರು?

ಮಗು 1 : ನಿನ್ನಲ್ಲಿ ಹಲವಾರು ಪ್ರಶ್ನೆಗಳೂ ಉಂಟು

ಮಗು 2 : ಅವುಗಳಿಗೆ ಉತ್ತರಗಳೂ ಉಂಟು.

ಮಗು 3 : ಹಾಗಾಗೇ ನಮ್ಮ ಪ್ರಶ್ನೆಗಳಿಗೆ ನಿನ್ನಿಂದ ಉತ್ತರ ಬೇಕು.

ಥೇಲೀಸ್ : ಹಾಗಾ ... ಕೇಳಿ ಕೇಳಿ..... ಅದೇನ್ ಪ್ರಶ್ನೆ ಕೇಳಿ.... ಪ್ರಶ್ನೆಗೆ ಉತ್ತರಗಳನ್ನು ಕೇಳಿಯೇ ತಿಳೀಬೇಕಿಲ್ಲ. ಯೋಚಿಸಿ, ತರ್ಕಿಸಿ, ಪ್ರಯೋಗಿಸಿ ಉತ್ತರ ಕಂಡುಕೋಬಹುದು.

ಮಗು 4 : ಹೌದ್ದೌದು ..... ನಾವೂ ಹಾಗೆ ಮಾಡ್ತಿದ್ದೀವಿ. ಗಣಿತದ ನಿನ್ನ ಥೇರಿಗಳನ್ನು ಪ್ರಯೋಗದ ಮೂಲಕ ತಿಳೀತಾ ಇದ್ದೀವಿ. ಪ್ರಶ್ನೆ ಪ್ರಯೋಗ ಶುರು ಮಾಡೋಣವಾ ಹಾಗಿದ್ರೆ ...?

ಥೇಲೀಸ್ : ಒಕೆ ..... ಶುರು ಮಾಡಿ

(ಮೂವರು ಲಾಟಿ ಬೀಸುತ್ತ ಮುಂದೆ ಬರುವರು)

ಥೇಲೀಸ್ : ಯಾಕ್ರೊ ಹೊಡಲಿಕ್ಕೆ ಬರ್ತಿದ್ದೀರಾ.

ಎಲ್ಲರೂ : ಊಂ ಹುಂ.... ಪ್ರಯೋಗಿಸ್ತಾ ಇದ್ದೀವೆ.

(ಎನ್ನುತ್ತ ಚಿಕ್ಕ ಕೋಲನ್ನು ಕೆಳಗೆ ಅಡ್ಡಲಾಗಿ ಹಿಡಿದು, ಅದಕ್ಕೆ ತಾಗಿಸಿ ಎರಡು ದೊಡ್ಡ ಕೋಲು ಹಿಡಿದು, ತ್ರಿಕೋನ ಒಂದನ್ನು ರಚಿಸುವರು.)

ಮಗು 1 : ಈ ತ್ರಿಕೋನದ ವೈಶಿಷ್ಟ್ಯವೇನು ಹೇಳಜ್ಜ

ಥೇಲೀಸ್ : ಒಂದು ತ್ರಿಕೋನದಲ್ಲಿ ಎರಡು ಬಾಹುಗಳು ಒಂದೆ ಅಳತೆಯಾಗಿದ್ರೆ ಅದರ ತಳದ ಅಭಿಮುಖ ಕೋನಗಳು ಸಮವಾಗಿರ್ತವೆ.

(ಈಗ ಎರಡು ಲಾಟಿಯನ್ನು ಕ್ರಾಸ್ ಹಾಕಿ ಹಿಡಿಯುವರು. ಅದನ್ನು ಥೇಲೀಸ್ ವಿಶ್ಲೇಶಿಸುವರು.)

ಥೇಲೀಸ್ ಎರಡು ಸರಳ ರೇಖೆಗಳು ಒಂದು ಬಿಂದುವಿನಲ್ಲಿ ಅಡ್ಡ ಹಾಯ್ದಾಗ ಪರಸ್ಪರ ವಿರುದ್ಧ ಕೋನಗಳು ಸಮವಾಗಿರ್ತವೆ.



(ಈಗ ವೃತ್ತಾಕಾರದ ಹಲಗೆ ಮಧ್ಯ ಅಡ್ಡಲಾಗಿ ಕೋಲೊಂದನ್ನು ಇಟ್ಟು, ವ್ಯಾಸ ಗುರುತಿಸಿ; ವ್ಯಾಸದ ಎರಡೂ ತುದಿಯಿಂದ ಒಂದೊಂದು ಕೋಲಿನ ತುದಿ ಇಟ್ಟು ಪರಿಧಿ ಮೇಲೆ ಒಂದೇ ಬಿಂದುವಿನಲ್ಲಿ ಸೇರಿಸಿ ತ್ರಿಭುಜ ಮಾಡುವರು).

ಮಗು 2 : ಈ ಬಗ್ಗೆ ವಿವರಣೆ ಹೇಳ್ತಿಯೇನಜ್ಜ

ಥೇಲೀಸ್ : (ನಗುತ್ತ) ಕಿಲಾಡಿ ಮಕ್ಕಳು.... ಒಂದು ವೃತ್ತದಲ್ಲಿನ ವ್ಯಾಸವು ಆ ವೃತ್ತದ ವಿಸ್ತೀರ್ಣವನ್ನು ಎರಡು ಸಮಭಾಗಗಳಾಗಿಸುತ್ತದೆ.

ಎಲ್ಲರೂ : ಹೌದ್ದೌದು..... ಹೌದು...

ಥೇಲೀಸ್ : ಒಂದು ವ್ಯಾಸವು ಅರ್ಧ ವೃತ್ತದ ಅಂಚಿನಲ್ಲಿ ಮೂಡಿಸುವ ಯಾವುದೇ ಕೋನ ಲಂಬ ಕೋನವಾಗಿರ್ತದೆ.

ಎಲ್ಲರೂ : ವಾಹ್ವ್...

ಥೇಲೀಸ್ : ಭಲೆ ಮಕ್ಕಳೆ ನಾನು ಕಂಡುಕೊಂಡ ಗಣಿತದ ಸತ್ಯಗಳನ್ನು ಚೆನ್ನಾಗಿ ಒರೆಗೆ ಹಚ್ಚಿದಿರಿ. ಯಾವುದೇ ಪ್ರಶ್ನೆಗೆ ಉತ್ತರ ಕೇಳಿಯೇ ತಿಳಿಯಬೇಕಿಲ್ಲ. ಇಂತಹ ಹಲವು ಸತ್ಯಗಳನ್ನು ಯೋಚಿಸಿ, ತರ್ಕಿಸಿ, ಪ್ರಯೋಗಿಸಿ ತಿಳಿಯಬಹುದು ಹಾಗಾದಾಗ ಹೊಸದರ ಹುಡುಕಾಟವಾಗುತ್ತೆ....



ಎಲ್ಲರೂ : ಧನ್ಯವಾದ ಅಜ್ಜ....

(ಮತ್ತೆ ಹಲಗೆ ನುಡಿಸುತ್ತ, ಕೋಲು ಹೊಡೆಯುತ್ತ, ಹಾಡುತ್ತ, ಕುಣಿಯುತ್ತ ನಡೆಯುವರು)

**ಹಿನ್ನೆ ಹಾಡು......**

**ನೀಲಗಡ್ಡದ ನೀಲಿ ಗಣ್ಣಿನ**

**ನೀಳ ಕಾಯದ ಮುದುಕ**

**ದೇಶ ಸುತ್ತಿದ ಕೋಶ ಓದಿದ**

**ಅಲೆಮಾರಿ ಮುದುಕ**

**ಅಜ್ಜನಜ್ಜನೊ... ನಮ್ಮ ಅಜ್ಜನೊ...**

**ಮಿಲೇಟಸ್ ಥೇಲಿಸ್‌ನೊ**

**ಗಣಿತ ತಜ್ಞನೊ ವ್ಯಾಪಾರಿಯೊ**

**ವ್ಯವಹಾರಿ ನಮ್ಮ ಥೇಲಿಸ್**

(ಮಕ್ಕಳು ಹೋಗ್ತಿದ್ದಂತೆ ದೂರದಲ್ಲಿ ನಿಂತು ನೋಡುತ್ತಿದ್ದ ಕೆಲವರು ಹತ್ತಿರಕ್ಕೆ ಬಂದು)

ಒಬ್ಬ : ಏನು ವಿದ್ಯೆ ಇದ್ರೆ ಏನು ಬಂತು.... ಎಲ್ಲ ಹುಚ್ಚುಹುಚ್ಚು.... ನಾಲ್ಕು ಕಾಸು ಕೈಯಲ್ಲಿ ಇಲ್ದೆ ಪರದಾಡ್ತಿಯಾ....

ಇನ್ನೊಬ್ಬ : ಹೌದಪ್ಪ.... ನಿನ್ನನ್ನು ನೋಡಿದರೆ ಅಯ್ಯೋ ಅನ್ನಿಸ್ತಿದೆ.

ಮತ್ತೊಬ್ಬ : ಹೌದು, ಅಯ್ಯೊ ಅನ್ನಿಸ್ತಿದೆ.

ಥೇಲೀಸ್ : ಅಂದ್ರೆ..... ನಿಮಗೆ ನಾನು ಪ್ರಯೋಜನ ಇಲ್ದೋನು, ನನ್ನ ಗಣಿತದ ಜ್ಞಾನ ಯಾವುದಕ್ಕೂ ಪ್ರಯೋಜನ ಇಲ್ಲದ್ದು... ಅಲ್ಲವೆ, ನನ್ನ ಜ್ಞಾನದ ಬಗ್ಗೆ ಮೆಚ್ಚುವುದಿರಲಿ.... ನನಗೆ ಇರೋ ಬಡತನವನ್ನು ಗೇಲಿ ಮಾಡ್ತಾ ಇದ್ದೀರಿ. ನೋಡ್ತಾ ಇರ್ರಿ ದುಡ್ಡು ಮಾಡೋದು ನನಗೇನೂ ಕಷ್ಟವಲ್ಲ, ಆದರೆ ದುಡ್ಡೇ ಎಲ್ಲವೂ ಅಲ್ಲ ಅಂತ ನಾನು ಆ ಕಡೆ ಮನಸ್ಸು ಮಾಡಿಲ್ಲ. ಬೇಕಿದ್ರೆ ನನಗೆ ಸ್ವಲ್ಪ ಕಾಲಾವಕಾಶ ಕೊಡಿ. ಹಣ ಸಂಪಾದನೆ ಮಾಡೋದು ಹೇಗೆ ಅಂತಾ ತೋರಿಸಿ ಕೊಡ್ತೀನಿ

(ಸಿಡುಕಿನಿಂದ ದಡದಡನೆ ಒಳ ನಡೆಯುವನು)

# ದೃಶ್ಯ–3

(ಥೇಲೀಸ್ ಕತ್ತೆ ಮೇಲೆ ಎಣ್ಣೆ ಕ್ಯಾನುಗಳನ್ನು ಹೇರಿಕೊಂಡು ಎಣ್ಣೆ ಮಾರಲು ಒಂದೊಂದೇ ವಠಾರಕ್ಕೆ ಪ್ರವೇಶಿಸುವನು)

ಥೇಲೀಸ್ : ಎಣ್ಣೆ ಬೇಕೆ ಎಣ್ಣೆ
ಆಲೀವ್ ಎಣ್ಣೆ
ಮೈಕಾಂತಿಗೆ ಸವರಿ ನೋಡಿ
ಸುಗಂಧ ದ್ರವ್ಯಕೆ ಬೆರೆಸಿ ನೋಡಿ
ಬೇಕೆ ಬೇಕು ಎಣ್ಣೆ
ಆಲೀವ್ ಎಣ್ಣೆ

ಒಬ್ಬ : ಅರೆ ಇವರ‍್ಯಾಕೆ ಎಣ್ಣೆ ಮಾರೋಕೆ ಬಂದ್ರು.... ಇವರು ಥೇಲಿಸ್ ಮೇಷ್ಟ್ರಲ್ಲವಾ ! ಒಳ್ಳೆ ಕ್ರಿಯೆಟಿವ್ ಮೇಷ್ಟ್ರು. ಹಿಂದೆ ನಮಗೆ ಪಾಠಾ ಮಾಡಿದವರು. ಹೋಮರ್‌ನ ವೀರಗಾಥೆಯನ್ನು ಅರಳು ಹುರಿದಂತೆ ನುಡೀತಿದ್ರು...... ತರಗತಿಯಲ್ಲೇ ಕೂಡಿ ಹಾಕದೆ ಹೊಲ, ಕೆರೆಕುಂಟೆ ಬೀದಿಗಳಲ್ಲೆಲ್ಲ ಸುತ್ತು ಹೊಡೆಸಿ ಗಣಿತ ಕಲಿಸುತ್ತಿದ್ದರು.

ಇನ್ನೊಬ್ಬ : ಹೌದಾ ......

ಒಬ್ಬ : ಹೂಂ.... ಕಾಣೋ....

# ದೃಶ್ಯ : 4

(ಮತ್ತೊಂದು ವಠಾರದ ಬೀದಿ....)

ಥೇಲೀಸ್ : ಎಣ್ಣೆ ಬೇಕೇನ್ರಿ .... ಎಣ್ಣೆ..... ಆಲೀವ್ ಎಣ್ಣೆ.....

ಒಬ್ಬಳು : ಇವರು ಥೇಲೀಸ್ ಅಲ್ವಾ .....ನಮ್ಮೂರ ಪಂಚಾಯ್ತಿ ಮೇಂಬರಾಗಿದ್ದವರು....

ಇನ್ನೊಬ್ಬಳು : ಹೌದಲ್ಲ..... ನಮ್ ಆಲೀವ್ ಬೆಳೆ ಮೇಲೆ ಸುಂಕ ಕಟ್ಟಿಸಿ ಕೊಳ್ತಿರಲಿಲ್ವೆ....

ಒಬ್ಬಳು : ಒಳ್ಳೆ ತೆರಿಗೆ ಸಂಗ್ರಹ ಮಾಡಿ ಜಮ್ ಅಂತ ಅದ್ದೂರಿಯಾಗಿ ಊರ ಜಾತ್ರೆ ಮಾಡಿಸ್ತಿದ್ರು.... ಏನ್ ಜಾತ್ರೆ ಅಂತೀಯಾ.....



# ದೃಶ್ಯ–5

(ಜಾತ್ರೆ ಸನ್ನಿವೇಶ ಮಕ್ಕಳು, ದೊಡ್ಡವರು ಎಲ್ಲರೂ ಜಾತ್ರೆಯಲ್ಲಿ ಸುತ್ತಾಡಿಕೊಂಡು ಸಂಭ್ರಮಿಸುತ್ತಿದ್ದಾರೆ.)

ಥೇಲೀಸ್ : ಹಾಂ... ಎಲ್ಲರೂ ಊಟ ಮಾಡ್ಕೊಂಡು ಹೋಗಿ

ಒಬ್ಬ : ಆಯ್ತಜ್ಜ

ಥೇಲೀಸ್ : ಹ್ಯಾಗಿದೆ ವ್ಯವಸ್ಥೆ

ಒಬ್ಬ : ತುಂಬಾ ಚೆನ್ನಾಗಿದೆ. ಜಾತ್ರೆಗೆ ಬರೊ ಜನಕ್ಕೆ ಊಟ, ನೀರು ವಿಶ್ರಾಂತಿಗೆ ಜಾಗ ಎಲ್ಲವೂ ಅಚ್ಚುಕಟ್ಟಾಗಿದೆ ಅಜ್ಜ.

ಥೇಲೀಸ್ : ಏನೋ ಜನ ಚೆನ್ನಾಗಿ ಬೆಳೀತಾರೆ... ಸುಂಕ ಕಟ್ಟಿತಾರೆ..... 'ಕೆರೆ ನೀರು ಕೆರೆಗೆ ಚೆಲ್ಲಿ ಹೆಸರು ಪಡೆಕೊಳ್ಳದು'. ನಮ್ಮದೇನಿದೆ.... ಏನೋ ಸೇವೆ ಅಂತ.....

ಒಂದೊಂದು ವರ್ಷ ಆಲೀವ್ ಬೆಳೆ ಚೆನ್ನಾಗಿ ಬರದಿದ್ರೆ ಯಾರೂ ಸುಂಕಾನೆ ಕಟ್ಟಲ್ಲ.... ಜಾತ್ರೆಗೆ ಜನಾನು ಬರಲ್ಲ.... ಆ ವರ್ಷ ಎಲ್ಲ ಸಪ್ಪೆಯಾಗಿರುತ್ತೆ... ಸರಿ ಊಟ ಮಾಡ್ಕಂಡು ಹೋಗಿ (ಜಾತ್ರೆ ಗದ್ದಲ....)

# ದೃಶ್ಯ :6

(ಥೇಲೀಸ್ ತನ್ನ ಮನೆ ಆವರಣದಲ್ಲಿ ಎಣ್ಣೆ ಗಾಣಗಳನ್ನು ರಿಪೇರಿ ಮಾಡಿಸುತ್ತಿದ್ದಾನೆ.... ದೂರದಿಂದ ಇಬ್ಬರು ಮಾತನಾಡಿಕೊಳ್ಳುತ್ತಿದ್ದಾರೆ. ಗೇಲಿ ಮಾಡಿ ನಗುತ್ತಾ ಹೋಗುತ್ತಾರೆ)

ಒಬ್ಬ : ಎಂತಾ ತಲೆ ಅಂತೀರಾ ಇವನದು... ಹುಚ್ಚ ... ಈ ಬೇಸಿಗೆ ಬಿರುಬಿಸಲಿನಲ್ಲಿ ಆಲೀವ್ ಬೆಳೆ, ಕಾಯಿಕೂಡ ಬಿಡುತ್ತಿಲ್ಲ. ಇಂತಹ ಕಾಲದಲ್ಲಿ ಯಾರ‍್ಯಾರೋ ಬೀಸಾಡಿದ ಗಾಣಗಳನ್ನು ರಿಪೇರಿ ಮಾಡಿಸ್ತಿದ್ದಾನೆ....

ಇನ್ನೊಬ್ಬ : ಅಷ್ಟೇ ಅಲ್ಲ.... ಗಾಣಾ ಮಾರೋದ್ಕೆ ಬಂದ್ರೆ ದುಡ್ಡು ಕೊಟ್ಟು ಕೊಂಡು ಕೊಳ್ತಿದ್ದಾನೆ..... ಹುಚ್ಚ.... (ನಗುತ್ತ ಹೋಗುವರು)

ಥೇಲೀಸ್ : (ಬಡಗಿಯನ್ನುದ್ದೇಶಿಸಿ) ಇವೆಲ್ಲ ಇವತ್ತು ರಿಪೇರಿ ಯಾಗಬೇಕು.

ಬಡಗಿ : ಸ್ವಾಮಿ ನಾನೊಂದು ಪ್ರಶ್ನೆ ಕೇಳ್ಲಾ....

ಥೇಲೀಸ್ : ಏನದು.....?

ಬಡಗಿ : ತಾತ ಮುತ್ತಾತರ ಕಾಲದಿಂದ್ಲೂ ಆಲೀವ್ ಬೆಳೆದು, ಗಾಣಾ ತಿರುಗಿಸಿ ಎಣ್ಣೆ ಮಾಡ್ತಿರೋ ಜನ...... ಈ ಎರಡು ವರ್ಷದಲ್ಲಿ ಬಿರು ಬಿಸಿಲಿನಿಂದ ಕಂಗೆಟ್ಟು; ಕಾಯಿ ಬಿಡ್ಲಿಲ್ಲ ಅಂತ ವಲಸೆ ಹೊರಟಿದ್ದಾರೆ. ಗಾಣಾ ಕಿತ್ತು ಬಿಸಾಡ್ತಿದ್ದಾರೆ... ಇಂತದ್ರೊಳಗೆ ನೀವು ದುಡ್ಡು ಖರ್ಚು ಮಾಡಿ ರಿಪೇರಿ ಮಾಡಿಸ್ತಿದ್ದಿರಲ್ಲ.... ಅನ್ನೋದು ನನಗೆ ಪ್ರಶ್ನೆಯಾಗಿದೆ.

ಥೇಲೀಸ್ : (ನಗುತ್ತ) ಬಡಗಿ ..... ನನ್ನ ಲೆಕ್ಕಾಚಾರ ನಿಮಗೆ ಅರ್ಥವಾಗೋದಿಲ್ಲ, ಹಾಗಾಗಿಯೇ ಸರಿಯಾದ ಲೆಕ್ಕಾಚಾರ ತಿಳಿದವರು ಶ್ರೀಮಂತರಾಗಿದ್ದಾರೆ. ನಾವು ಹೀಗೆ ಇದ್ದೀವಿ

ಬಡಗಿ : ಅದು ಹ್ಯಾಗೆ ಅಂತೀನಿ

ಥೇಲೀಸ್ : ನೋಡು ಬಡಗಿ, ಆರೇಳು ವರ್ಷಕೊಮ್ಮೆ ಹೀಗಾಗ್ತದೆ. ಇರೋವಾಗ ಹಿಡಿತದಿಂದ ಖರ್ಚು ಮಾಡಿದರೆ ಇಂತ ಸಂದರ್ಭದಲ್ಲಿ ಹ್ಯಾಗೋ ಬದುಕಿಕೊಬಹುದು. ಕಷ್ಟದ ಕಾಲಾ ಬಂತು ಅಂತಾ ಇರೋ ವಸ್ತು ಮಾರಿ ಬಿಟ್ರೆ ಮುಂದಿನ ಭವಿಷ್ಯ ಹ್ಯಾಗೆ.... ಇವತ್ತು ಬಿಸಿಲು ಇದೆ ಅಂತಾನೆ ಇಟ್ಕೊಳ್ಳಿ... ಸ್ವಲ್ಪ ಸ್ವಲ್ಪ ಆಲೀವ್ ಬೆಳೆ ಬಂದಿದೆ ಅಲ್ಲವಾ.

ಬಡಗಿ : ಹೌದು





ಥೇಲೀಸ್ : ಈ ಕಾಯಿಯಲ್ಲಿ ನೀರಿನ ಅಂಶ ಇಲ್ಲವೇ ಇಲ್ಲ.... ಸಮೃದ್ಧಿಯಾದ ಉತ್ಕೃಷ್ಟ ಎಣ್ಣೆ ಇದರಲ್ಲಿದೆ. ಈಗ ಈ ಬೀಜ ಗಾಣಕ್ಕೆ ಹಾಕದೇ ನನಗೆ ಮಾರತಾ.. ಇದ್ದಾರೆ..... ಇದರಿಂದ ತಯಾರಿಸಿದ ಎಣ್ಣೆ ಹತ್ತು ವರ್ಷ ಇಟ್ಟರೂ ಕೆಡೋದಿಲ್ಲ.... ಮುಂದಿನ ಎರಡು ವರ್ಷ ನಾನು ಎಷ್ಟೇ ರೇಟಿನಲ್ಲಿ ಮಾರಿದ್ರು ಕೊಂಡ್ಕೊಳ್ತಾರೆ.

ಅಲ್ಲ ಬಡಗಿ.... ಇವತ್ತು ಮಳೆ ಇಲ್ಲ. ಆಲೀವ್ ಬೆಳೆ ಇಲ್ಲ.... ನಾಳೆನೂ ಹೀಗೇ ಇರ್ರೈತಾ, ಮಳೆ ಆಗುತ್ತೆ... ತಂಪಾದ ಗಾಳಿ ಬೀಸುತ್ತೆ..... ಆಲೀವ್ ಬೆಳೆ ಚೆನ್ನಾಗಿ ಬೆಳೆಯುತ್ತೆ..... ಒಳ್ಳೆ ಫಸಲು ಬರುತ್ತೆ.... ಆಗ ಜನಗಳಿಗೆ ಎಣ್ಣೆ ಮಾಡೋಕೆ ಗಾಣಾ ಬೇಕಲ್ಲಾ...

(ಹೀಗೆ ಹೇಳುತ್ತಿದ್ದಂತೆ ಥೇಲೀಸ್‌ನ ಮುಖದಲ್ಲಿ ಬದಲಾವಣೆ.... ಕಾಲ ಬದಲಾವಣೆ.... ಸಮೃದ್ಧಿಯ ನಗು... ಬಡಗಿ ಗಾಣಗಳನ್ನು ಜೋಡಿಸಿ ಸಿದ್ಧಪಡಿಸುತ್ತಿದ್ದಾನೆ. ಜನರು ಕೊಳ್ಳಲು ಬಂದು ಕೊಂಡು ಕೊಂಡು ಹೋಗುತ್ತಾರೆ. ಬಡಗಿ ಆಶ್ಚರ್ಯದಿಂದ ನೋಡುತ್ತಾನೆ.)

ಥೇಲೀಸ್ : ಆಗೋದಿಲ್ಲಮ್ಮ ರೇಟ್ ಫಿಕ್ಸ್ ಮಾಡಿದ್ದೇನೆ. ಎರಡು ಸಾವಿರ ಕೊಟ್ರೆ ಮಾತ್ರ ಒಯ್ರಿ.... ಇಲ್ದಿದ್ರೆ ಬೇಡ.....

ರೈತ : ಅಲ್ಲ ಆವಾಗ ನಮ್ಮಿಂದ ನೂರು ಇನ್ನೋರು ರೂಪಾಯಿಗೆ ಕೊಂಡುಕೊಂಡಿದ್ದಿ ! ಈಗ ಎರಡು ಸಾವಿರಕ್ಕ ಮಾರ್ತಿರಲ್ಲ....

ಥೇಲೀಸ್ : ಅರೆ ಹಾಗಂದ್ರ ಹ್ಯಾಂಗಮ್ಮ .... ಇದು ವ್ಯಾಪಾರ... ನೀವ್ಯಾಕೆ ಅವತ್ತು ಗಾಣಾ ಮಾರಿದಿರಿ... ಮೂಲೆಗೆ ಎತ್ತಿ ಬೀಸಾಕಿದ್ರಿ....

ರೈತ : ಸರಿ, ಈಗ ನನ್ನ ಹತ್ರ ಅಷ್ಟು ಹಣವಿಲ್ಲ...ಹ್ಯಾಗೆ ಮಾಡೋದು ಸ್ವಲ್ಪ ಈಗ ಕೊಟ್ಟು ಎಣ್ಣೆ ಮಾರಿದ ಮೇಲೆ ಕೊಡ್ಲಾ.... ?

ಥೇಲೀಸ್ : ಆಗಬಹುದು... ಆದರೆ ಹಣಕ್ಕೆ ಸ್ವಲ್ಪ ಬಡ್ಡಿ ಸೇರಿಸಿ ಕೊಡಬೇಕು. ಅಷ್ಟೇ....

ರೈತ : ಆಯ್ತು ....... ಕೊಡು (ಗಾಣಾ ಎತ್ತಿಕೊಂಡು ಹೋಗುವನು)

ಇನ್ನೊಬ್ಬ ರೈತ: ನಮಗೆ ಗಾಣಾ ಬೇಕಿದೆ.

ಥೇಲೀಸ್ : ಎರಡು ಸಾವಿರ....

ರೈತ : ಅಷ್ಟೊಂದು ದುಡ್ಡು ಇಲ್ಲ.....

ಥೇಲೀಸ್ : (ನಗುತ್ತ) ಹಾಗಾದರೆ ನನ್ನ ಹತ್ರ ಗಾಣಾನೇ ಇಲ್ಲ.... ಅವು ನನಗೆ ಎಣ್ಣೆ ತೆಗೆಯೊದಕ್ಕೆ ಬೇಕು....

ರೈತ : ಹಾಗಂದ್ರೆ ಹ್ಯಾಗೆ ಸ್ವಾಮಿ....

ಥೇಲೀಸ್ : ಏನ್ ಮಾಡೋದು ಸ್ವಾಮಿ .... ಬೇಕಿದ್ರೆ... ಸ್ವಲ್ಪ ಅಡ್ವಾನ್ಸ ದುಡ್ಡು ತಗೊಂಡು ಹೋಗಿ .... ಗಾಣಾನೇ ಮಾರಿದ್ದಿರಿ... ಬೀಜ ಬಂದ ಮೇಲೆ ನನಗೆ ಮಾರಿ ಬಿಡಿ.... ಎಣ್ಣೆ ಅರೆಯೋ ಕಷ್ಟಾನೂ ಇಲ್ಲ.... ಎಣ್ಣೆ ಮಾರೊ ಸಮಸ್ಯೆಯೂ ಇಲ್ಲ ಏನಂತೀರಾ.....

ರೈತ : ಹಂಗಾ.... ಸರಿ ಮತ್ತೆ, ದುಡ್ಡು ಕೊಡ್ರಿ ಮತ್ತೆ.

(ದುಡ್ಡು ಪಡೆದು ಹೋಗುವನು. ಹೀಗೆಯೇ ಮತ್ತೊಬ್ಬಳು ಬೇರೊಬ್ಬರು ಬರುವರು... ಹಿನ್ನೆಲೆ ಹಾಡು)

**ಹಾಡು.....**

**ಹೇಗಿದೆ ವ್ಯಾಪಾರ**

**ಬುದ್ಧಿಯ ವ್ಯವಹಾರ**

**ಊಳುವ ರೈತ ಕುಶಲ ಕರ್ಮಿಗಳು**

**ತಿಳಿಯುವ ಸುವಿಚಾರ**

## ದೃಶ್ಯ–7

(ಚೆನ್ನಿ ಮುನ್ನಿ ಇಬ್ಬರೂ ಹಾಡುತ್ತ ಪ್ರವೇಶಿಸುವರು)

**ಬಾರೆ ಚೆನ್ನಿ ಹೋಗೋಣ ಕಣಿ ಹೇಳಾಕ**

**ಬಾರೆ ಮುನ್ನಿ ಹೋಗೋಣ ಕಣಿ ಹೇಳಾಕ**

**ಕಣಿಗಿಣಿ ಹೇಳಿಕೊಂಡು ಊರು ಕೇರಿ ಸುತ್ತಿಕೊಂಡು**

**ಸೀಮೆದಾಟಿ ಹೋಗೋಣು ಬಾರ**

ಚೆನ್ನಿ : ಕಣಿ ಹೇಳ್ತಿನೆಮ್ಮ ಕಣಿ... ... ಕಣಿ ಹೇಳ್ತಿನೆಣ್ಣೋ ಕಣಿ... ... ಬರಗಾಲ ಬಂತು ಅಂತ ಎತ್ತು ಚಕ್ಕಡಿ ಮಾರಬ್ಯಾಡ್ರಿ. ದನಕರುಗಳನ್ನ ಕಟಗರಿಗೆ ಕೊಡಬ್ಯಾಡ್ರಿ, ಅವುಗಳ್ನ ಕಷ್ಟಪಟ್ಟು ಜ್ವಾಪಾನ ಮಾಡಿ ಉಳಿಸಿಕೊಂಡ್ರ.... ಅವು ನಿಮ್ಮನ್ನ ಇಷ್ಟಪಟ್ಟು ಸೇವಾ ಮಾಡ್ತಾವು ನೆನಪಿರ್ಲಿ...

ಮುನ್ನಿ : ಹೌದಕ್ಕ.. ಹೌದು. ಈ ಮಿಲೇಟಸ್ಸಿನ ಜನರ್ನ ನೋಡಿದರ ಗಾಭರಿ ಆಕ್ಕೈತಿ. ಮಳಿ ಇಲ್ಲ ಅಂತ ಬೀಜ ಮಾರಿದ್ರು..... ಬೆಳಿ ಇಲ್ಲ ಅಂತ



ಗಾಣಾ ಮಾರಿದ್ರು..... ಮಳಿ ಆದ್ರ ಬಿತ್ತಾಕ ಬೀಜಿಲ್ಲ, ಬೆಳಿ ಬಂದ್ರ ಎಣ್ಣಿ ತಗಿಯಾಕ ಗಾಣ ಇಲ್ಲ... ಆವಾಗ ಕೂಗಿ ಕೂಗಿ ಬಾಯಿಬಾಯಿ ಬಡಕೊಂಡ್ರೂ ಸಿಗೂದಿಲ್ಲ.

ಚೆನ್ನಿ : ಅದ್ಕ ಚೆನ್ನಿ ಈ ಹಳ್ಳಿ ಹೈದರು ಅಣ್ಣ–ಅಕ್ಕಂದ್ರು ತಿಳಿಕೋಬೇಕು. ಇವರು ದಡ್ಡರಾದರ ...ಇವರು ದುಡ್ಡು ಇನ್ನೆಲ್ಲಿಗೋ ಹೋಗಿ ಸೇರತ್ತ ... ಹೂಂ..... ಮಾಡಿದ್ದುಣ್ಣೊ ಮಾರಾಯಾ... ಬಾಬಾ.... ಹೊತ್ತಾತು ಹೋಗೂಣು...

**('ಬಾರೆ ಚೆನ್ನಿ ಹೋಗೋಣ .......' ಹಾಡುತ್ತ ಹೋಗುವರು)**

## ದೃಶ್ಯ–8

(ಥೇಲೀಸ್ ಮನೆಯ ಜಗಲಿ (ಕಟ್ಟೆ) ಮೇಲೆ ದುಡ್ಡು ಎಣಿಸುತ್ತಿದ್ದಾನೆ ಮಕ್ಕಳು ಹಿಂಡು ಹಿಂಡಾಗಿ ಪ್ರವೇಶಿಸುವರು).

ಮಗು : ಏನಜ್ಜ ದುಡ್ಡು ಎಣಿಸ್ತಾ ಇದ್ದೀಯಾ... ?

ಥೇಲೀಸ್ : ಕಣ್ಣಿಗೆ ಕಾಣ್ತಿಲ್ಲವೆ....

ಮಗು : ಏನ್ ಅಜ್ಜ ಎಷ್ಟೊಂದು ದುಡ್ಡು ಸಂಪಾದಿಸಿದ್ದೀಯಾ

ಥೇಲೀಸ್ : ಹ್ಯಾಗಿದೆ ಮಕ್ಕಳೆ... ಈಗ ನಾನು ಶ್ರೀಮಂತ ಅಲ್ಲವಾ ....

ಮಗು 2 : ಖಂಡಿತ ಶ್ರೀಮಂತ....

ಥೇಲೀಸ್ : ಹಾಗಿದ್ರೆ ಈ ಸಿಹಿ ತಿಂಡಿ ತಿನ್ರಿ. (ಸಿಹಿ ಪಟ್ಟಣ ಕೊಡುತ್ರ) ಹ್ಯಾಗಿದೆ ನನ್ನ ವ್ಯಾಪಾರಾ.....?

ಮಗು : ಬುದ್ಧಿಯ ವ್ಯಾಪಾರ..... ಬುದ್ಧಿಯ ವ್ಯವಹಾರ.......

ಥೇಲೀಸ್ : ಏನೋ ಹಾಗೆ ನೋಡ್ತಾ ಇದ್ದೀಯಾ..... ನಿನಗೂ ದುಡ್ಡು ಬೇಕಾ .... ಎಷ್ಟು ಬೇಕು. (ಮಕ್ಕಳು ನಗುವರು)

ಮಕ್ಕಳು : ಊಂ..... ಹುಂ.... ಬಡವರಿಗೆ ಹಂಚಜ್ಜ...... ಮನೆ ಕಟ್ಟಿ ಮರ ನೆಡಿಸು, ಕೆರೆ ಕಟ್ಟಿಸಿ ನೀರು ಹರಿಸು. ಜನರಿಗೆ ಉಪಯೋಗ ಆದೀತಜ್ಜ

ಥೇಲೀಸ್ : ವ್ಹಾ ಒಳ್ಳೆ ಮಕ್ಕಳು.... ಸ್ವಲ್ಪ ತಗೊಳ್ಳಿ.... ನಿಮಗೆ ಇಷ್ಟದ ವಸ್ತು ಕೊಂಡ್ಕೊಳ್ರಿ..... ನೀವು ಚೆನ್ನಾಗಿರಬೇಕು.

ಮಕ್ಕಳು : ನಮಗೆ ಈ ಸಿಹಿ ತಿಂಡಿ ಸಾಕಜ್ಜ

ಥೇಲೀಸ್ : ಒಳ್ಳೆ ಮಕ್ಕಳು..... ಮಕ್ಕಳು ಚಿಕ್ಕವರಿರುವಾಗ ದುಡ್ಡಿನ ರುಚಿ ಹಚ್ಚಬಾರದು. ನಿಮ್ಮ ತಂದೆ ತಾಯಿ ಚೆನ್ನಾಗಿ ಬೆಳೆಸಿದ್ದಾರೆ.

(ಮಕ್ಕಳು ಖುಷಿಯಿಂದ ಸಿಹಿ ತಿಂಡಿ ಹಂಚಿಕೊಂಡು ತಿನ್ನುತ್ತ; ಹಂಚಿ ತಿನ್ನೋಣ ಎಂದು ಹಾಡುವರು)

**ಹಂಚಿ ತಿನ್ನೋಣ । ನಾವು**

**ಹಂಚಿ ತಿನ್ನೋಣ**

**ಮಂಚದ ಕಾಲಿನಂತೆ । ನಾವು**

**ಸಮನಾಗಿ ಬಾಳೋಣ ॥ಪ॥**

**ಎಲ್ಲರೂ ಸೇರೋಣ । ಶ್ರಮದಿ**

**ಸಮನಾಗಿ ದುಡಿಯೋಣ**

**ದುಡಿತದಿ ಬಂದ ಲಾಭವನೆಲ್ಲ**

**ಸಮನಾಗಿ ಹಂಚೋಣ ॥ 1 ॥**

**ಒಂದಾಗಿ ಬಾಳೋಣ । ನಾವು**

**ಚೆಂದಾಗಿ ಬಾಳೋಣ**

**ಸ್ವಾಭಿಮಾನ ಸರ್ವ ಸಮತೆಯ**

**ಸಮಾಜ ಕಟ್ಟೋಣ ॥2॥**

## ದೃಶ್ಯ –9

(ಥೇಲೀಸ್‌ನನ್ನು ಹುಡುಕಿಕೊಂಡು ಜನರ ಗುಂಪೊಂದು ಬರುತ್ತದೆ.)

ಗುಂಪು : ನಮಸ್ಕಾರ ಥೇಲೀಸ್ ಅಜ್ಜನಿಗೆ

ಥೇಲೀಸ್ : ನಮಸ್ಕಾರ, ನೈಲ್ ನದಿ ಬಯಲಿಂದ ಬಂದಿರೋ ರೈತರು ತಾನೆ ನೀವು. ನದಿ.... ಹೋದ ವರ್ಷಕ್ಕಿಂತ ಜಾಸ್ತಿ ಮಣ್ಣನ್ನ ತಂದು ಚೆಲ್ಲಿರಬೇಕು..... ಅಲ್ವೇನು?

ಗುಂಪು : ಹೌದಜ್ಜ .... ಹೌದ್ದೌದು.

ವ್ಯಕ್ತಿ 1 : ಅರೆ! ಇದೆಲ್ಲಾ ನಿಮಗೆ ಹೇಗೆ ಗೊತ್ತಾಯ್ತು ....?



ವ್ಯಕ್ತಿ 2 : ಅದ್ಕೆ ಅಲ್ವೇನ್ರೋ ಥೇಲೀಸ್ ಅಜ್ಜಾ ಮಹಾ ಮೇಧಾವಿ ಅನ್ನೋದು.

ಥೇಲೀಸ್ : ಮಣ್ಣಾಂಗಟ್ಟಿ.... ಮೇಧಾವಿ ಅಂತೆ ಮೇಧಾವಿ. ನೋಡೋ ಕಣ್ಣಿದ್ರೆ....... ಸರಿಯಾಗಿ ಉಪಯೋಗಿಸೋದು ಗೊತ್ತಿದ್ರೆ.... ನೋಡಿದ್ದನ್ನ ಸರಿಯಾಗಿ ಅರ್ಥ ಮಾಡಿಕೊಳ್ಳೋದು ಬಂದ್ರೆ.... ನನಗಷ್ಟೇ ಯಾಕೋ ನಿಮಗೂ ಗೊತ್ತಾಗುತ್ತೆ... ಕತ್ತೇಗೂ ಗೊತ್ತಾಗೋ ವಿಷಯ. ಹಾಂ ಹೌದು. ನೀವು ನಡೆದು ಬರೋವಾಗ ನಿಮ್ಮ ಪಾದಕ್ಕೆ ಏನು ಮೆತ್ತಿದೆ ಅನ್ನೋದನ್ನ ಕಣ್ಣು ಬಿಟ್ಟು ನೋಡಿದ್ದೀರಾ?

ಗುಂಪು : ಹ್ಞಾಂ!

ವ್ಯಕ್ತಿ 3 : ಹೌದ್ದೌದು .... ಮೆಕ್ಕಲು ಮಣ್ಣು ..... !

ಥೇಲೀಸ್ : ಆ ಮೆಕ್ಕಲು ಮಣ್ಣನ್ನ ನೈಲ್ ನದಿ ಬಾಚ್ಕೊಂಡು ಬಂದು ದಡಕ್ಕೆ ಚೆಲ್ಲುತ್ತೆ ತಾನೆ ? ನಿಮ್ಮ ಪಾದ, ಮೊಣಕಾಲಿಗೂ ಅದು ಮೆತ್ತಿದೆ ಅಂದ್ರೆ..... ನದಿ ಜಾಸ್ತಿ ಮೆಕ್ಕಲು ಮಣ್ಣನ್ನು ತಂದು ಚೆಲ್ಲಿದೆ ಅಂತಾ ತಾನೆ ಅರ್ಥ.

ಗುಂಪು : ಹೌದ್ದೌದು ನಿಜ

ಥೇಲೀಸ್ : ಇದನ್ನ ಹೇಳೋದಕ್ಕೆ ಮೇಧಾವಿ ಬೇಕಾ ?

ಗುಂಪು : ಇಲ್ಲ ಇಲ್ಲ....

ವ್ಯಕ್ತಿ 4 : ಸರಿಯಾಗಿ ನೋಡಿ... ತಿಳಿದುಕೊಳ್ಳೋ ಕಣ್ಣುಗಳಿದ್ರೆ ಸಾಕು.

ಥೇಲೀಸ್ : ಬರೀ ಅಷ್ಟೇ ಅಲ್ಲಪ್ಪಾ ದೊರೆ.... ಒಳ್ಳೆಯದನ್ನ ಸರಿಯಾಗಿ ಅರ್ಥ ಮಾಡಿಕೊಳ್ಳೋ ರೀತಿನೂ ಬೇಕಾಗುತ್ತೆ, ಅದನ್ನೆ ತರ್ಕಬದ್ದ ರೀತಿ ಅನ್ನೋದು.... ಇಂಥ ಮಣ್ಣಲ್ಲಿ ಬೇಸಾಯದ ಬದಲು ಕಾರ್ಖಾನೆ ಕಟ್ಟಿಸ್ತೀವಿ, ಇಮಾರತಿ ಮಾಡ್ತೀವಿ ಅಂತಾ ಬಂದವ್ರಿಗೆ ಜಮೀನು ಬಿಟ್ಟು ಕೊಡೋಕಾಗುತ್ತ. ತರ್ಕ ಬದ್ಧವಾಗಿ ವಿವರಿಸಿ ಹೇಳಬೇಕು. ಜಮೀನನ್ನ ರಕ್ಷಿಸಿಕೊಳ್ಳಬೇಕು. ಅದಿರ್ಲೀ.... ಹುಡುಕ್ಕೊಂಡು ಬಂದಿದ್ದೀರಲ್ಲ.... ನನ್ನಿಂದ ಏನಾಗಬೇಕು?

ವ್ಯಕ್ತಿ 1 : ಮುಖ್ಯವಾದ ಒಂದು ಕೆಲಸ. ಹ್ಯಾಂಗ ಹೇಳಬೇಕು ಗೊತ್ತಾಗ್ತಾ ಇಲ್ಲ.

ಥೇಲೀಸ್ : ಗೊತ್ತಾಗ್ತಿಲ್ಲ ಅಂದ್ರೆ ಸುಮ್ಮನೇ ವಾಪಾಸ ಹೊರಟು ಹೋಗ್ರಿ. ಯಾಕ ಬರಾಕ ಹೋಗಿದ್ರಿ.. ಯಾರಿಗೆ ಸಮರ್ಥವಾಗಿ ಸಂಕಟ ಹೇಳಿಕೊಳ್ಳೋದಕ್ಕೆ ಬರಲ್ವೊ ಅವರಿಗೆ ಸೂಕ್ತವಾದ ಪರಿಹಾರ ಪಡೆಯೋದಕ್ಕೂ ಆಗಲ್ಲ.

ವ್ಯಕ್ತಿ 2 : ಇಲ್ಲ ಇಲ್ಲ ಹೇಳ್ತಿನಿ.... ಈತನಿಗೆ ಇಬ್ಬರು ಹೆಂಡ್ತೀರು.....

ಥೇಲೀಸ್ : ಕೇವಲ ಇಬ್ಬರು.... ! ಅಷ್ಟೇ (ನಗುವನು).... ಸಾಲದು, ಇನ್ನೂ ಇಬ್ಬರಾಗಿದ್ರೆ ಚೆನ್ನಾಗಿರೋದು.

ಗಂಡ : ಹಾಗೆ ಹೇಳಿ ಇವ್ರಿಗೆ .... ಛ್ಛಿ ಛ್ಛಿ.... ನಾಲ್ಕು ಜನ ಯಾಕೆ ಬೇಕು ಅಂತಾನೂ ಹೇಳಿ

ಥೇಲೀಸ್ : ಹೌದ್ರಪ್ಪಾ ..... ಇದ್ರೆ ನಾಲ್ಕು ಜನ ಹೆಂಡ್ತೀರು ಇರಬೇಕು.... ಯಾಕೆ ಹೇಳಿ

ಗುಂಪು : ಯಾಕೆ ?

ಥೇಲೀಸ್ : ಸತ್ತಾಗ ಚಟ್ಟ ಹೊತ್ಕೊಂಡು ಹೋಗೊದಕ್ಕೆ ನಾಲ್ಕು ಜನ ಬೇಕಲ್ಲ. ನಾಚಿಕೆ ಆಗಬೇಕು .... ಸರಿ ಮುಂದಕ್ಕೆ ಹೇಳಿ.

ವ್ಯಕ್ತಿ 4 : ಆ ಇಬ್ಬರ ಹೆಂಡ್ತಿಯರಿಗೆ ಇಬ್ಬಿಬ್ರ ಮಕ್ಕಳು

ವ್ಯಕ್ತಿ 5 : ಒಟ್ಟು ನಾಲ್ಕು ಜನ !

ಗುಂಪು : ಸಾಕಾಗುತ್ತೆ. ಮುಂದಕ್ಕೆ ಹೇಳಿ

ವ್ಯಕ್ತಿ 1 : ನಾಲ್ಕು ಜನಕ್ಕೂ ಆಸ್ತಿ ಭಾಗ ಆಗಬೇಕು

ವ್ಯಕ್ತಿ 2 : ನದಿ ಮೆಕ್ಕಲು ಮಣ್ಣು ತಂದು ಚೆಲ್ಲಿರೋದ್ರಿಂದ ಜಮೀನು ಅಳೆಯೋದು ಕಷ್ಟ.

ವ್ಯಕ್ತಿ 3 : ಅದೂ ಇಬ್ಬರು ಹೆಂಡಂದಿರ ನಾಲ್ಕೂ ಜನ ಮಕ್ಕಳಿಗೂ ಆಸ್ತಿ ಸಮವಾಗಿ ಭಾಗ ಆಗಬೇಕು.

ಥೇಲೀಸ್ : ಅದೇನು ಮಹಾ ಕಷ್ಟ. ಒಟ್ಟು ಜಮೀನನ್ನು ಸಮವಾಗಿ ನಾಲ್ಕು ಭಾಗ ಮಾಡಿದ್ರೆ ಆಯ್ತು.

ವ್ಯಕ್ತಿ 4 : ಛೆ ! ಛೆ ! ಎಲ್ಲಾದ್ರೂ ಉಂಟೆ ಥೇಲೀಸ್ ಅಜ್ಜ ..... ಇವರ ಸಂಪ್ರದಾಯದ ಪ್ರಕಾರ ಚಿಕ್ಕಮಕ್ಕಳಿಗೆ ಜಾಸ್ತಿ, ದೊಡ್ಡವರಿಗೆ ಕಡಿಮೆ ಆಸ್ತಿ ಸೇರಬೇಕು.

ವ್ಯಕ್ತಿ 5 : ಇಬ್ಬರು ಹಿರಿಯ ಮಕ್ಕಳಿಗೂ ಒಂದೇ ಅಕಾರ ಮತ್ತು ಚಿಕ್ಕ ಮೂಲೆಗಳನ್ನು ಹೊಂದಿದ್ದು ಸಮವಾಗಿರಬೇಕು. ಹಾಗೇ ಇಬ್ಬರು ಕಿರಿಯ ಮಕ್ಕಳಿಗೂ ಒಂದೇ ಅಕಾರ ಮತ್ತು ದೊಡ್ಡ ಮೂಲೆಗಳನ್ನು ಹೊಂದಿದ್ದು ಸಮವಾಗಿರಬೇಕು.



ಥೇಲೀಸ್ : ಅದೂ ಏನು ಮಹಾ ಕಷ್ಟ ಅಲ್ಲ ಜಮೀನಿನಲ್ಲಿ ಒಂದನ್ನೊಂದು ಕತ್ತರಿಸೋ ಹಾಗೆ ಎರಡು ಸರಳ ರೇಖೆ ಎಳೆದುಬಿಡಿ.

ಗುಂಪು : ಎಳೆದು ಬಿಟ್ರೆ........?

ಥೇಲೀಸ್ : ಎಳೆದು ಬಿಟ್ರೆ .... ಆಗ ತ್ರಿಭುಜದ ವಿರುದ್ಧ ಕೋನಗಳು ಸಮವಾಗಿರುತ್ತವೆ. ಆ ಪ್ರಕಾರ ಆ ಕೋನಗಳ ರೇಖೆಗಳನ್ನು ವೃದ್ಧಿಸಿ ಹಂಚಿದ್ರೆ ಆಯ್ತು .... (ಗುಂಪು ತಲೆ ಕೆರೆದುಕೊಳ್ಳುತ್ತಿದೆ)

ವ್ಯಕ್ತಿ 1 : ಕೋನ..... ರೇಖೆಗಳನ್ನು ವೃದ್ಧಿಸುವುದು ..... ನಮ್ತಾಯಾಣ್ಯಾಗೂ ಒಂದೂ ಗೊತ್ತಾಗತಿಲ್ಲ.

ವ್ಯಕ್ತಿ 2 : ಏನೋ ಮಹಾ ಮೇಧಾವಿ ಅಂತ ಬಂದ್ರೆ ಹೇಳಿದ್ದನ್ನು ಮಾಡೋದು ಬಿಟ್ಟು ನಮ್ಮ ಮಿದುಳಿಗೆ ಕೈ ಹಾಕ್ತಾನೆ.

ವ್ಯಕ್ತಿ 3 : (ಮೆತ್ತಗೆ) ಅವನು ಹೇಳಿದ್ದು ಏನು ಅನ್ನೋದು ನಿನಗೇನಾದ್ರೂ ಗೊತ್ತಾಯ್ತಾ ? ಇಲ್ಲಾ ..... ನಂಗೇ ಗೊತ್ತಿಲ್ಲ ಅಂದ್ಮೇಲೆ ನಿಮ್ಮ ಮಕ್ಕಳ ನಾವು .... ನಮಗೆ ಹ್ಯಾಗೆ ಗೊತ್ತಾಗುತ್ತೆ.

ಥೇಲೀಸ್ : ಏಯ್ ಮಂಕಣ್ಣ .... ತಲೇನ ಯಾವ ಯಾವುದಕ್ಕೂ ಬಳಸೋಕಾಗುತ್ತೆ. ಲೆಕ್ಕ ಹಾಕೋದಕ್ಕೆ ಬಳಸೋಕಾಗಲ್ವಾ.... ನಡೀರಿ ಅಳೆದು ತೋರಿಸ್ತೀನಿ..... (ಹೊರಡುತ್ತಾರೆ)

## ದೃಶ್ಯ: 10

(ಜಮೀನಿನ ಬಳಿ ಬರುತ್ತಾರೆ)

ತಂದೆ : ನೋಡಿ ಸ್ವಾಮಿ ಇದೇ ನಮ್ಮ ಜಮೀನು

ಥೇಲೀಸ್ : ಇದೇ ನಿನ್ನ ಜಮೀನು ಅಂತ.. ಹ್ಯಾಗೆ ಹೇಳ್ತೀಯಾ ? ಗಡಿ ಗುರುತು ಎಲ್ಲಾ ಮುಚ್ಚೊಗಿದೆಯಲ್ಲ....

ತಂದೆ : ಇಲ್ಲಿ ಒಂದೇ ಒಂದು ಕಲ್ಲು ಉಳಿದಿದೆ ಬನ್ನಿ ತೋರಿಸ್ತೀನಿ.... ಇದೇ ಆ ಕಲ್ಲು ಇದು ನಮ್ಮ ಜಮೀನಿನ ಮಧ್ಯೆ ಇರೋದು. ಇಲ್ಲಿಂದ ಆ ಕಡೇ ಆ ಕರ್ಜೂರದ ಮರ. ಅಲ್ಲಿಗೂ ಈ ಕೆಳಗೆ ಆ ದಿಬ್ಬದ ಅಂಚು ಇದೆಯಲ್ಲ... ಅಲ್ಲೀವರೆಗೆ ಇದೆಲ್ಲ ನನ್ನದೇ ಜಮೀನು.

ಥೇಲೀಸ್ : ಇದಿಷ್ಟು ಸಾಕು ಸುಲಭವಾಗಿ ಅಳೀಬಹುದು. ಹಾಗೆ... ಹಂಚಬಹುದು.

ವ್ಯಕ್ತಿ 1 : ಅದು ಹ್ಯಾಂಗೆ ಸುಲಭವಾಗಿ ಅಳೆದು ಬಿಡ್ತೀರಾ... ಈ ಎಲ್ಲಾ ಜಮೀನಿನ ವಿಸ್ತೀರ್ಣ ಕೊಡ್ಕೊಬೇಕು. ನಾಲ್ಕು ಜನಕ್ಕೂ ಅಳೆದು ಹಂಚಬೇಕು. ....

ಥೇಲೀಸ್ : ಬೇಕಿಲ್ಲ. ಸುಲಭವಾಗಿ ಅಳೆಯೋಕಾಗುತ್ತೆ. ನೀವು ಹೇಳಿದ ಅಕಾರದಲ್ಲಿ ಹಂಚೋಕೆ ಇದು ಸರಿಯಾಗುತ್ತೆ. ಜ್ಯಾಮಿತಿಯಿಂದ ಆಗೋ ದೊಡ್ಡ ಪ್ರಯೋಜನ ಇದೇನೆ. ನೋಡ್ತಾ ಇರಿ. ನಾನು ಹೇಳಿದ್ನಲ್ಲ ಎರಡು ಸರಳ ರೇಖೆ ಒಂದನ್ನೊಂದು ಕತ್ತರಿಸಿದಾಗ ವಿರುದ್ಧ ಕೋನಗಳು ಸಮನಾಗಿರುತ್ತವೆ ಅಂತ. ಆ ನಿಯಮದಿಂದ ಇದು ಸುಲಭ. ಹೀಗೊಂದು ಸರಳ ರೇಖೆ, ಹಾಗೊಂದು ಸರಳ ರೇಖೆ ಗುರುತು ಮಾಡಿ. (ಗೆರೆ ಎಳೆಯುತ್ತಾರೆ)

ಥೇಲೀಸ್ : ಈಗ ಈ ವಿರುದ್ಧ ಕೋನಗಳು ಅಂದ್ರೆ ಮೂಲಗಳು ಸಮವಾಗಿದೆಯೋ ಇಲ್ಲವೊ?

ಗುಂಪು : ಹೌದು ಸಮವಾಗಿದೆ.

ಥೇಲೀಸ್ : ಈ ವಿರುದ್ಧ ಜಮೀನುಗಳು ?





ಗುಂಪು : ಇವು ಒಂದಕ್ಕೊಂದು ಸಮ

ಥೇಲೀಸ್ : ಈಗ ಈ ಎರಡು ದೊಡ್ಡ ಮೂಲೆ ಅಥವಾ ಕೋನ ಹೊಂದಿರುವ ಭಾಗಾನ ಚಿಕ್ಕ ಮಕ್ಕಳಿಗೆ ಹಂಚಿ, ಈ ಚಿಕ್ಕ ಮೂಲೆ ಅಥವಾ ಕೋನ ಹೊಂದಿರುವ ಭಾಗಗಳನ್ನು ದೊಡ್ಡಮಕ್ಕಳಿಗೆ ಹಂಚಿ.

ಗುಂಪು : ಅರೇ... ಹೌದಲ್ವಾ ?

ವ್ಯಕ್ತಿ 1 : ಎಷ್ಟು ಸುಲಭವಾಗಿ ಬಗೆ ಹರೀತು.....

ವ್ಯಕ್ತಿ 2 : ಅದ್ಕೆ ಕಣ್ರಪ್ಪಾ ಥೇಲೀಸ್ ಅಜ್ಜ ಮಹಾ ಮೇಧಾವಿ ಅನ್ನೋದು....

ಥೇಲೀಸ್ : ಏನು ! ಮೇಧಾವಿನಾ.... ಏನೂ ಇಲ್ಲ ಚಿಕಿತ್ಸಕ ಬುದ್ಧಿ ಬೇಕು ಅಷ್ಟೇ.

ತಂದೆ : ತುಂಬಾ ಉಪಕಾರ ಆಯ್ತು ಅಜ್ಜ ಧನ್ಯವಾದ

ಥೇಲೀಸ್ : ಆಯ್ತು... ಹೋಗಿ ಬನ್ನಿ.

## ದೃಶ್ಯ 11

(ಚೆನ್ನಿ ಮುನ್ನಿ ಇಬ್ಬರೂ 'ಬಾರೆ ಚೆನ್ನಿ ಹೋಗೋಣ ........' ಹಾಡುತ್ತ ಪ್ರವೇಶಿಸುವರು

ಮುನ್ನಿ : ಅಕ್ಕ... ಈ ಥೇಲೀಸ್ ಅಜ್ಜನಿಗೆ ಅಲೆಮಾರಿ ಮುದುಕ ಅನ್ನೋದು ಸರಿಯಾಗಿಯೇ ಐತಿ. ಇಷ್ಟು ವಯಸ್ಸಾಗೈತಿ ಅಲೆಗ್ಸಾಂಡ್ರಿಯಾಕ್ಕೆ ಯಾಕ ಹೋಗಬೇಕಿತ್ತು.

ಚೆನ್ನಿ : ದೇಶ ಸುತ್ತು ಇಲ್ಲ ಕೋಶ ಓದು ಅಂತ ಇಲ್ಲೇನು...ಅಜ್ಜ ಈಗ ಈಜಿಪ್ತಿನ ಪಿರ‍್ಯಾಮಿಡ್ ನೋಡಾಕ ಹೊಂಟಾನ.

ಮುನ್ನಿ : ಪಿರ‍್ಯಾಮಿಡ್ ಅಂದ್ರೇನು.. ಅವೇನು ನಮ್ಮ ತಿನ್ನೋ ಪಡ್ಡಿನೆಂಗದಾವಾ...

ಚೆನ್ನಿ : ಏಯ್... ಮುನ್ನಿ... ಬಲೆ ಬೇಸಿ ಅದಿನೋಡು ನೀನು.. ಪಿರ‍್ಯಾಮಿಡ್ ಅಂದ್ರ ಸತ್ತವರ ಗೋರಿ.

ಮುನ್ನಿ : ಅಯ್ಯ ಬಿಡ... ಗೋರಿ ನಮ್ಮೂರಾಗ ಇದ್ದುವಲ್ಲ... ಅಲ್ಲಿಗ್ಯಾಕ ಹೋಗಬೇಕಿತ್ತು.

ಚೆನ್ನಿ : (ನಗುತ್ತ) ಅವು ಬರೀ ಗೋರಿ ಅಲ್ಲ. ಜಗತ್ತಿನ ಅದ್ಭುತಗಳು.

ಬಾ..ಸಾಲಾಗಿ ಕತ್ತೆ ನಿಲ್ಲಿಸಿ ಎಣ್ಣಿಕ್ಯಾನ ಹೇರಿಕೊಂಡು ವ್ಯಾಪಾರ ಮಾಡಕೊಂತ ಪ್ರವಾಸ ಹೊರಟಾನ.. ಬಾ ನೋಡೂಣು.

**('ಬಾರೆ ಚೆನ್ನಿ ಹೋಗೋಣ .......' ಹಾಡುತ್ತ ಹೋಗುವರು)**

## ದೃಶ್ಯ: 12

(ಒಂದರ ಹಿಂದೆ ಒಂದು ಸಾಲಾಗಿ ಕತ್ತೆಗಳನ್ನು ನಿಲ್ಲಿಸಿದ್ದಾನೆ. ಆಲೀವ್ ಎಣ್ಣೆ ತುಂಬಿದ ಕ್ಯಾನುಗಳನ್ನು ಹೇರಿದ್ದು... ಕತ್ತೆಗಳ ಮೆರವಣಿಗೆ ಹೊರಟ ರೀತಿಯಲ್ಲಿ ಸಾಲಾಗಿ ನಿಂತಿವೆ. ಥೇಲೀಸ್ ಅಲೆಗ್ಸಾಂಡ್ರಿಯಾಕ್ಕೆ ಹೊರಡುವ ತಯಾರಿಯಲ್ಲಿದ್ದಾನೆ. ಜನ ದೂರದಲ್ಲಿ ನಿಂತು ಮಾತನಾಡಿಕೊಳ್ಳುತ್ತಿದ್ದಾರೆ. )

ಒಬ್ಬ : ಕೊನೆಗೂ ಹೊರಟೆ ಬಿಟ್ಟ ನೋಡಿ ಹಠಮಾರಿ, ಇರೋ ದುಡ್ಡನ್ನ ಸಿಕ್ಕಿದವರಿಗೆ ಹಂಚಿ ಹೊರಟೇ ಬಿಟ್ಟ.

ಇನ್ನೊಬ್ಬ : ಎಷ್ಟು ಹೇಳಿದ್ರೂ ತನ್ನ ಹಠ ಬಿಡ್ತಿಲ್ಲ, ಹುಚ್ಚ.... ಅಲೆಗ್ಸಾಂಡ್ರಿಯಾಕ್ಕೆ ಹೋಗಿ ಇವನು ಕಡಿದು ಕಟ್ಟೆ ಹಾಕುವದು (ಇಮಾರತಿ ಕಟ್ಟುವದು) ಅಷ್ಟರಲ್ಲೇ ಇದೆ.

ಮತ್ತೊಬ್ಬ : ಇಲ್ಲೇನೋ... ಎಲ್ಲರೂ ಪರಿಚಯಸ್ತರಿದ್ದಾರೆ. ಇವನ ಹುಚ್ಚಾಟ ತಾಳಿಕೊಳ್ತಾರೆ. ಇವನನ್ನು ಅಲ್ಲಿ ಯಾರು ಮಾತನಾಡಿಸ್ತಾರೆ. ಏನಾದರೂ ಶ್ಯಾನೆತಾನ ಹೇಳಾಕ ಹೊರಟರೆ ಕಲ್ಲು ಹೊಡೆದು ಓಡಿಸ್ತಾರೆ. ಅಷ್ಟೆ...

ಬೇರೊಬ್ಬ : ಅರೆ, ಹುಚ್ಚ ಮುದುಕ ಡಜನ್ ಕತ್ತೆಗಳ ಮೇಲೆ ಎಣ್ಣೆ ಹೇರಿಕೊಂಡು ಹೊರಟಿದ್ದಾನೆ.

ಪಯೋ : (ಇವರ ಮಾತನ್ನು ಕೇಳಿಸಿಕೊಳ್ಳುತ್ತ ನಿಂತಿದ್ದ ಪಯೋ)

ಸ್ವಾಮಿ : ನೀವು ಗಣಿತ ತಜ್ಞ ಥೇಲೀಸ್ ಬಗ್ಗೆ ಮಾತನಾಡುತ್ತಿದ್ದೀರಾ.

ಒಬ್ಬ : (ವ್ಯಂಗ್ಯವಾಗಿ) ಯಾಕೆ ನೀವು ಆ ಅಲೆಮಾರಿ ಹುಚ್ಚ ಮುದುಕನ್ನು ಹುಡುಕುತ್ತಿದ್ದೀರಾ....?

ಮತ್ತೊಬ್ಬ : ಹೋಗಿ ಅಲ್ಲಿ ಡಜನ್ ಕತ್ತೆಗಳ ಮೇಲೆ ಎಣ್ಣೆ ಹೇರಿಕೊಂಡು ಅಲೆಕ್ಸಾಂಡ್ರಿಯಾಕ್ಕೆ ಹೊರಟಿದ್ದಾನೆ. ಜೊತೆಗಾರರು ಇಲ್ಲಾ ಅಂತಾ ಕಾಣುತ್ತೆ.......... ಯಾಕೆ ನಿನಗೂ ಅವನ ಹಾಗೆ ಹುಚ್ಚಾ .... ಹೋಗಿ (ಪಯೋ ಓಡಿಕೊಂಡು ಥೇಲೀಸನ ಹತ್ತಿರಕ್ಕೆ ಬರುವನು)

ಪಯೋ : ನಮಸ್ಕಾರ್ ಸರ್....... ನಾನು ಪಯೋ ಅಂತ.... ನಿಮ್ಮನ್ನೆ ಹುಡುಕಿಕೊಂಡು ಬಂದಿದ್ದೀನಿ.

ಥೇಲೀಸ್ : ಯಾಕೆ...?



ಪಯೋ : ಜ್ಞಾನದಾಹದಿಂದ ನಿಮ್ಮ ಬಳಿ ಕೆಲವು ವಿಚಾರಗಳನ್ನು ತಿಳಿದುಕೊಳ್ಳಲು ಬಂದಿದ್ದೇನೆ. ನಿಮ್ಮ ಜೊತೆ ನಾನೂ ಪ್ರಯಾಣಿಸುವವನಿದ್ದೇನೆ.

ಥೇಲೀಸ್ : (ಪಯೋನನ್ನು ಮೇಲಿಂದ ಕೆಳಕ್ಕೆ ದಿಟ್ಟಿಸಿ ನೋಡುವನು)

ಪಯೋ : ಸರ್, ನಿಮ್ಮ ಪ್ರಯಾಣದಲ್ಲಿ ನಾನು ಸಹಾಯವಾಗುತ್ತೇನೆ. ಹಾಗೆ ನಿಮ್ಮ ಕತ್ತೆಗಳನ್ನು ಪ್ರಯಾಣದಲ್ಲಿ ದಣಿಯದಂತೆ ನೋಡಿಕೊಳ್ಳುವ ಕೆಲಸ ನನಗಿರಲಿ.

ಥೇಲೀಸ್ : (ಗಡ್ಡ ನೇವಿಕೊಂಡು ಒಮ್ಮೆ ನಗು ಬೀರಿ) ಸರಿ ... ಬಾ.... ವ್ಯಾಪಾರದಲ್ಲಿ ಪಾಲು ಕೇಳಬೇಡ ಮತ್ತೆ ....

(ಎಂದು ನಕ್ಕು, ನೋಡಪ್ಪ... ಅಲೆಕ್ಸಾಂಡ್ರಿಯಾದಿಂದ ಸಾವಿನಾಚೆಯ ಕಣಿವೆಯವರೆಗೂ ಹೋಗಿ ಬರುವರೆಗೆ ಜೊತೆಯಲ್ಲಿರಬೇಕು. ನೀನು ಇಚ್ಚಿಸುವ ಕೆಲಸವನ್ನೇ ಮಾಡಿ.)

ಪಯೋ : ಆಯ್ತು, ಈಜಿಪ್ತಿನ ಸಾವಿನ ಕಣಿವೆಯವರೆಗೆ ಹೋಗಿ ಬರಲು ಏನೆಂದರೂ ಒಂದು ವರ್ಷ ಕಾಲಾವಕಾಶ ಬೇಕು. ಅಷ್ಟು ವರ್ಷ ಈ ಮೇಧಾವಿಯೊಡನೆ ಇರೋದು, ವಾಹ್, ... (ಸಂಭ್ರಮಿಸುವನು. ಥೇಲೀಸ್ ಮತ್ತು ಪಯೋ .... ಸಾಲು ಕತ್ತೆಗಳೊಂದಿಗೆ ಪ್ರಯಾಣ ಬೆಳೆಸುವರು)

**ಹಾಡು**

**ಕತ್ತೆಯ ಮೆರವಣಿಗೆ ಅಲ್ಲವಿದು**

**ಬುದ್ಧಿಮತ್ತೆಯ ಮೆರವಣಿಗೆ**

**ಸುತ್ತು ದೇಶಗಳ ಸುತ್ತುತ ಸಾಗಿದ**

**ತಜ್ಞರ ಮೆರವಣಿಗೆ,**

**ಗಣಿತ ತಜ್ಞರ ಮೆರವಣಿಗೆ**

# ದೃಶ್ಯ: 13

(ಕತ್ತೆಗಳೊಂದಿಗೆ ಪ್ರಯಾಣ)

ಥೇಲೀಸ್ : ಪಯೋ ಆ ಹನ್ನೊಂದನೇ ಕತ್ತೆಗೆ ನೀರಡಿಕೆಯಾಗಿದೆ. ಅದು ನೀರಿಗೆ ಗುಟುಕು ಹಾಕ್ತಾ ಇದೆ. ಅದನ್ನು ಮೊದಲನೆ ಕತ್ತೆಯ ಮುಂದೆ ನಿಲ್ಲಿಸು.

ಪಯೋ : ಮೊದಲೇ ಅದು ನಿಧಾನವಾಗಿ ನಡೆಯುತ್ತಿದೆ. ಮುಂದೆ ನಿಲ್ಲಿಸಿದರೆ ಬೇಗನೆ ಹೆಜ್ಜೆ ಹಾಕೀತೆ.

ಥೇಲೀಸ್ : ಪಯೋ ನಾನು ನಿನಗೆ ಹೇಳಿಲ್ಲ? ನನ್ನ ಲಾಯಲದಲ್ಲೇ ಅತ್ಯಂತ ಬುದ್ಧಿವಂತ ಕತ್ತೆ. ಅದು

ಪಯೋ : ಸ್ವಾಮಿ, ಅದನ್ಹೇಗೆ ಬುದ್ಧಿವಂತ ಕತ್ತೆ ಎಂದು ಗುರುತಿಸುತ್ತೀರಿ.

ಥೇಲೀಸ್ : ಅದೊಂದು ವಿಚಿತ್ರ ಘಟನೆ, ನಾನು ಎಣ್ಣೆ ವ್ಯಾಪಾರ ಮಾಡೊದಕ್ಕಿಂತ ಮೊದಲು ಉಪ್ಪಿನ ವ್ಯಾಪಾರ ಮಾಡ್ತಾ ಇದ್ದೆ.

ಪಯೋ : ಉಪ್ಪಿನ ವ್ಯಾಪಾರ ಮಾಡ್ತಾ ಇದ್ರಿ ?!

ಥೇಲೀಸ್ : ಹಾಂ.... ಉಪ್ಪಿನ ವ್ಯಾಪಾರ ಮಾಡ್ತಾ ಇದ್ದೆ. ಓಲಂಪಿಕ್ ಕ್ರೀಡೆಗಳು ಶುರುವಾದಾಗ ಹಳ್ಳಿಯಲ್ಲಿ ಪಾಠ ಹೇಳಬೇಕೆಂದರೆ ಕೇಳಲು ಯಾವ ಹುಡಗರೂ ಬರ್ತಾ ಇರ್ಲಿಲ್ಲ. ಬದುಕಲು ಸ್ವಲ್ಪ ದುಡ್ಡು ಬೇಕಲ್ಲವೇ? ಉಪ್ಪನ್ನು ತುಂಬಿಕೊಂಡು ಬಂದು ಹಳ್ಳಿಗಳನ್ನು ಸುತ್ತಿ ಮಾರಾಟ ಮಾಡ್ತಿದ್ದೆ.

ಪಯೋ : ಹಾಂ....

ಥೇಲೀಸ್ : ಉಪ್ಪು ತುಂಬಿದ ಚೀಲ ಹೊತ್ತ ಕತ್ತೆಗಳು ಒಂದು ಸಣ್ಣ ಕಾಲುವೆ ದಾಟಬೇಕಾಗಿತ್ತು., ಆ ಕಾಲುವೆಗೆ ಒಂದು ದೊಡ್ಡ ಮರದ ದಿಮ್ಮಿಯನ್ನು ಅಡ್ಡಲಾಗಿ ಹಾಕಲಾಗುತ್ತಿತ್ತು.

ಪಯೋ : ಹುಂ...

ಥೇಲೀಸ್ : ಉಪ್ಪು ತುಂಬಿದ ಚೀಲ ಹೊತ್ತ ಕತ್ತೆಗಳೂ, ಮನುಷ್ಯರೂ ದಾಟಿ ಹೋಗಬೇಕಾಗಿತ್ತು. ಯಾವಾಗಲು ಈ ಚುರುಕು ಕತ್ತೆಯೇ ಮುಂದೆ ಹೆಜ್ಜೆ ಹಾಕುತ್ತಿತ್ತು. ಆದರೆ ಒಮ್ಮೆಯಾಕೊ ಹಿಂದೆ ಬಿದ್ದಿತು. ಎಲ್ಲಾ ಕತ್ತೆಗಳು ಸಾಲಾಗಿ ದಿಮ್ಮಿಯ ಮೇಲೆ ದಾಟುತ್ತಿದ್ದವು.



ಪಯೋ : ಆಮೇಲೆ....?

ಥೇಲೀಸ್ : ಹಿಂದಿದ್ದ ಈ ಕತ್ತೆ ಕಿರುಚುತ್ತಾ ಮರದ ದಿಮ್ಮಿಯ ಮೇಲೆ ದಾಟದೆ ಪಕ್ಕದ ಕಾಲುವೆಗೆ ಬಿದ್ದು ಈಜಿ ಆಚೆ ದಡ ಸೇರಿತು.

ಪಯೋ : ಅಂದರೆ ಈ ಕತ್ತೆಯೊಂದೇ ನಾಯಕನಾಗಬೇಕೆಂದು ಈ ರೀತಿ ಮಾಡಿರಬಹುದು. ಏಕೆಂದರೆ ನಮ್ಮ ಹಳ್ಳಿಗಳಲ್ಲಿ ಮೇಯಲು ಹೋದ ದನಕರು, ಕುರಿಗಳಲ್ಲಿ ಒಂದೊ ಎರಡೊ ನಾಯಕರು ಇದ್ದೇ ಇರತಾವು, ಅವು ಮನೆಯ ಹೊರಗೆ ಹೋಗುವಾಗ, ಬರುವಾಗ ಗುಂಪಾಗಿ ನಡೆಯುವಾಗ ತಾವೇ ಮೊದಲು ಇರುತಾವು.



ಥೇಲೀಸ್ : ಇರಬಹುದು ಆದರೆ ಇದು ಅದಕ್ಕಿಂತ ಒಂದು ಹೆಜ್ಜೆ ಮುಂದು.. ಮರುದಿನ ಈ ಚುರುಕು ಕತ್ತೆಯನ್ನೇ ಮುಂದೆ ಬಿಟ್ಟೆ.

ಪಯೋ : ಆಗ ಸರಿ ಹೋಯ್ತಾ..

ಥೇಲೀಸ್ : ಊಂಹುಂ, ಆಗಲೂ ನೀರಿನಲ್ಲಿ ಬಿದ್ದು ಈಜಿಕೊಂಡೇ ಹೋಯ್ತು

ಪಯೋ : ಹೌದಾ..?

ಥೇಲೀಸ್ : ಹೌದು ... ಮೂರ್ನಾಲ್ಕು ದಿನ ಹಾಗೇ ಮಾಡಿತು. ಯೋಚಿಸಿದೆ ಸತ್ಯ ಹೊಳೆಯಿತು.

ಪಯೋ : ಏನದು....?

ಥೇಲೀಸ್ : ಈ ಕತ್ತೆ ನೀರಿನಲ್ಲಿ ಈಜಿದಾಗ ಬೆನ್ನ ಮೇಲೆ ಹೊತ್ತುಕೊಂಡಿದ್ದ ಉಪ್ಪಿನ ಚೀಲದಲ್ಲಿನ ಉಪ್ಪು ಕರಗಿ, ಭಾರ ಕಡಿಮೆಯಾಗುತ್ತಿತ್ತು. ಹಾಗಾಗಿ ಇದಕ್ಕೆ ಮುಂದಿನ ದಾರಿ ಸಾಗಲು ಹಗುರವಾಗ್ತಿತ್ತು. ಇದನ್ನರಿತ ಈ ಕತ್ತೆ ನೀರಲ್ಲಿ ಈಜಿಕೊಂಡು ನದಿ ದಾಟೋ ಪ್ಲಾನ್ ಮಾಡ್ತಿತ್ತು.

ಪಯೋ : ಆದ್ರೂ ಇದೆಲ್ಲ ಅದಕ್ಕೆ ಹೇಗೆ ಗೊತ್ತಾಗುತ್ತೆ ಸರ್? ಅದು ನಿಮ್ಮ ತರ್ಕ ಇರಬಹುದು ಅಷ್ಟೇ...

ಥೇಲೀಸ್ : ಪಯೋ, ನಾನು ಕೇವಲ ತರ್ಕಕ್ಕೆ ನಿಲ್ಲುವನಲ್ಲ, ಸತ್ಯ ಕಂಡುಕೊಳ್ಳುವವರೆಗೆ ಬಿಡುವುದಿಲ್ಲ. ಪಯೋ : ಮತ್ತೆ ಏನ್ಮಾಡಿದ್ರಿ, ಕತ್ತೆಗೆ ನಾಲ್ಕು ಬಾರಿಸಿದಿರಾ ?

ಥೇಲೀಸ್ : ಇಲ್ಲ ಇಲ್ಲ... ಹಾಗೆ ಮಾಡಬಾರದು... ಆಲೋಚನೆ ಬದಲಿಸಿಕೊಂಡವರಿಗೆ ದಂಡನೆ ಪರಿಹಾರವಲ್ಲ. ಪುನರ್ ಆಲೋಚನೆ ಮಾಡುವಂತೆ ಪ್ರತಿಕ್ರಿಯಿಸಬೇಕು. ಮೂರನೇ ದಿನದಿಂದ ಈ ಕತ್ತೆಯ ಬೆನ್ನ ಮೇಲೆ ಉಪ್ಪಿನ ಚೀಲದ ಬದಲಿಗೆ ತೆಂಗಿನ ನಾರು ತುಂಬಿದ ಚೀಲಗಳನ್ನು ಹೇರಿದೆ.

ಪಯೋ : ಹಾಂ...!

ಥೇಲೀಸ್ : ಹೌದು ತೆಂಗಿನ ನಾರು ತುಂಬಿದ ಚೀಲ ಹೇರಿದೆ. ಎಂದಿನಂತೆ ಈ ಕತ್ತೆ ನೀರಿನಲ್ಲಿ ಧುಮಕಿ ಈಜುತ್ತಾ ಆಚೆ ದಡ ಸೇರಿತು.



ಪಯೋ : ಆ ನಾರು ತುಂಬಿದ ಚೀಲ ನೀರನ್ನು ಹೇರಿಕೊಂಡು ಭಾರ ಆಗಿರಬೇಕಲ್ಲವೆ?

ಥೇಲೀಸ್ : ಹಾಂ.... ಒಂದರೆಡು ದಿನ ಈ ಭಾರವನ್ನು ಗಮನಿಸಿದ ಈ ಕತ್ತೆ ಯಥಾ ರೀತಿ ನೇರವಾಗಿ ಎಲ್ಲ ಕತ್ತೆಗಳಂತೆ ಮರದ ದಿಮ್ಮಿ ಮೇಲೆಯೇ ನಡೆದು ಹೋಯಿತು.

ಪಯೋ : ಬಪ್ಪರೆ! ಈ ಕತ್ತೆಗಳಿಗೂ ಬುದ್ಧಿಯಿದೆ ಅಂತಾ ತೋರಿಸಿಕೊಟ್ಟ ಮೇಧಾವಿ, ಅವುಗಳಿಗೂ ಬುದ್ಧಿ ಕಲಿಸಿದ ಚಾಣಾಕ್ಷರು ನೀವು...

**ಹಾಡು**

**ಕತ್ತೆಗೂ ಪಾಠ ಕಲಿಸಿದನೀತ**

**ಉತ್ತಮರೊಳಗತ್ಯುತ್ತಮನು**

**ಪ್ರಾಣಿಗೂ ತಲೆಯಿದೆ ಪ್ರಾಣಿಗೂ ಕಲಿವಿದೆ**

**ನೋಡುವ ಮತಿಯಿರಬೇಕೆಂದ**

# ದೃಶ್ಯ: 14

ಪಯೋ : ಸರ್ ಅಲ್ನೋಡಿ.. ಆ ಕತ್ತೆ ಕಣಿವೆಯತ್ತ ಜಾರ್ತಿರೋದು

ಥೇಲೀಸ್ : (ನಗುತ್ತ) ಆಹಾ..... ಆಹಾ..... ನೋಡಿದೆಯಾ ಪಯೊ... ನಮ್ಮ ಈ ಚುರುಕು ಕತ್ತೆಗೂ ಗಣಿತ ಗೊತ್ತು

ಪಯೋ : ಇದರಲ್ಲೇನಿದೆ ಸ್ವಾಮಿ ಗಣಿತ? ಎಲ್ಲಿ ಆ ಎಣ್ಣೆ ಜಾಡಿಗಳು ಜಾರಿ ಬಿದ್ದು ಹೋದವೊ ಅಂತ ಭಯಪಟ್ಟೆ ಅಷ್ಟೆ...

ಥೇಲೀಸ್ : ಪಯೊ, ಇದರಲ್ಲೇನೂ ಗಣಿತ ಇಲ್ಲ ಅಂತೀಯಾ...

ಒಂದು ತ್ರಿಭುಜದಲ್ಲಿ ಎರಡು ಬಾಹುಗಳ ಮೊತ್ತ ಮೂರನೇಯದಕ್ಕಿಂತ ಜಾಸ್ತಿ ಅಂತಾ ನೀನು ಕೇಳಿಲ್ಲವೆ ? ಅದು ಕತ್ತೆಗೂ ತಿಳಿದಿದೆ. ನೇರ ಹೋಗಿ ಪಕ್ಕದಲ್ಲಿಳಿದು ಸೇತುವೆಯ ಬಳಿ ಬರುವುದಕ್ಕಿಂತ ನೇರವಾಗಿ ಕಣಿವೆಗೇ ಇಳಿಯುವುದು. ಹತ್ತಿರವಲ್ಲವೇ?

ಪಯೋ : ವಾಹ್ ! ಕತ್ತೆಯ ನಡಿಗೆಯಲ್ಲೂ ಗಣಿತ ಗುರುತಿಸುವ ನಿಮ್ಮ ಈ ಗಣಿತದ ತಿಳಿವಿನ ಆಳವನ್ನು ಬಲ್ಲವರೇ ಬಲ್ಲರು.

ಧ್ವನಿ : (ಸ್ವಲ್ಪ ದೂರದಿಂದ) ಹಾ ಬನ್ನಿ ಬನ್ನಿ ... ಅಲೆಕ್ಸಾಂಡ್ರಿಯಾಕ್ಕೆ ಹೋಗುವವರು ಬನ್ನಿ.....

ಥೇಲೀಸ್ : ಹಾಂ.... ನಡೆ ಪಯೊ .... ಈಜಿಪ್ಟ್‌ನ ಕಡೆಗೆ ಸಾಗುವ ಹಾಯಿ ದೋಣಿಯ ನಾವಿಕ ಕೂಗುತ್ತಿದ್ದಾನೆ, ನಾನು... ನೀವು ಮತ್ತೆ ಈ ಹನ್ನೆರಡು ಕತ್ತೆಗಳು ಹತ್ತಿ ಕುಳಿತುಕೊಳ್ಳಲು ಸ್ವಲ್ಪ ಸಮಯ ತೆಗೆದುಕೊಳ್ತದೆ. ನಡೆ ಬೇಗ ಬೇಗ ನಡೆ.

ಪಯೋ : ಹಾಂ .... ಬನ್ನಿ ..... ಹುರ್ರಾ..... ಟ್ರುಟ್ರು .... ಹುರ್ರಾ..



# ದೃಶ್ಯ 15

(ನಾವೆ ಹೊರಡುತ್ತದೆ..... ನಾವಿಕ, ಪ್ರಯಾಣಿಕರು ಖುಷಿಯಿಂದ ಹಾಡುತ್ತ ನಾವೆಯಲ್ಲಿ ಕೂತುಸಾಗರದಲ್ಲಿ ಸಾಗುತ್ತಿದ್ದಾರೆ.)

**ಹೊಯ್ಯಾರೆ ಹೊಯ್ಯಾ ಹೋ...ಹೊ**

**ಹೊಯ್ಯಾರೆ ಹೊಯ್ಯ ಹೋ..ಹೊ.../ಪ/**

**ಹಾಯಿ ದೋಣಿ ಹತ್ತಿ ಕುಳಿತು**

**ಹಾಯಾಗಿ ಸಾಗುವ**

**ಸಾಗರದಿ ಏಳುವ ತೆರೆಗಳ**

**ತಾಳಕ್ಕೆ ಹಾಡುವ...../ಪ/**

**ಬೆಳಗು ಹರಿವಿನ ಬೆರಗು**

**ತಂಪಾದ ಗಾಳಿ ತೀಡಿ**

**ದಾರಿ ಸಾಗಿ ದಣಿದ ಜೀವ**

**ಹಾ.. ಎನ್ನುತ ಸಂಭ್ರಮಿಸಿ /ಪ/**

**ಸಾಗುತಿದೆ ಹಾಯಿದೋಣಿ**

**ತೀರದಿಂದ ತೀರಕೆ........ /ಪ/**



## ದೃಶ್ಯ 16

(ರಾತ್ರಿ ಸಮಯ. ಸಾಗರ ತೀರದ ಬಿಡಾರದ ಮುಂದೆ ನಿಂತಿದ್ದಾರೆ. ಸ್ವಲ್ಪ ದೂರದಲ್ಲಿ ಥಿಬ್ಸ್ ದೇವಾಲಯಗಳು, ಈಜಿಪ್ತಿನ ಪಿರ್‍ಯಾಮಿಡ್‌ಗಳು ಕಾಣುತ್ತಿವೆ.)

ಥೇಲೀಸ್ : ಧನ್ಯ ಪಯೋ.. ನಾವು ಧನ್ಯ.....

ಪಯೋ : ಹೌದು ಸ್ವಾಮಿ.. ಈ ಥಿಬ್ಸ್ ಸಾಗರದ ದೇವಾಲಯಗಳು ಎಂತಹ ಅದ್ಭುತ ! ದೈತ್ಯ ವಿಗ್ರಹಗಳು, ಅತೀ ಎತ್ತರದ ಕಂಬಗಳು ವ್ಹಾ !.......

ಥೇಲೀಸ್ : ಹೌದು ಪಯೋ... ಇಷ್ಟು ಭಾರೀ ಕಟ್ಟಡಗಳನ್ನು ಕಟ್ಟುವ ಜಾಣ್ಮೆ ಶಕ್ತಿ ಇರುವ ಈ ಜನ ಮತ್ತೊಂದು ಪ್ರಪಂಚವನ್ನೇ ಕಟ್ಟಬಲ್ಲರು ಅಲ್ಲವೇ?

ಪಯೋ : ಹೌದು ಸ್ವಾಮಿ

ಥೇಲೀಸ್ : ನಾವು ಕೆಲವು ಜಾಮಿತಿಯ ಆಕೃತಿಗಳ ಬಗ್ಗೆ ತಲೆ ಕೆಡಿಸಿಕೊಂಡಿದ್ದರೆ. ಇಲ್ಲಿನ ಜನ ಘನಾಕೃತಿಗಳ ಬಗ್ಗೆ ನಿಖರವಾದ ಲೆಕ್ಕಾಚಾರ ಮಾಡುತ್ತಿದ್ದಾರೆ. ಇವರು ಕಟ್ಟಿರುವ ಪಿರ್‍ಯಾಮಿಡ್‌ಗಳೇ ಇದಕ್ಕೆ ಸಾಕ್ಷಿ.

ಪಯೋ : ನನಗೆ ಈ ಕೂಡಲೇ ಪಿರಾಮಿಡ್‌ಗಳನ್ನು ನೋಡುವ ಆಸೆ.. ಪಿರಾಮಿಡ್‌ಗಳ ಪಕ್ಕದ ಬೀಡಾರದಲ್ಲೇ ಇದ್ದರೂ ನೋಡಲಾಗುತ್ತಿಲ್ಲ.

ಥೇಲೀಸ್ : ಇನ್ನೇನು ಸ್ವಲ್ಪ ಹೊತ್ತಿನಲ್ಲೇ ಮೂರು ಗಂಟೆ ಕಳೆದರೆ ಸೂರ್ಯ ಮೂಡಿಬರ್ತಾನೆ, ಬೆಳಗಾಗ್ತದೆ. ಪಿರಾಮಿಡ್‌ಗಳನ್ನು ವೀಕ್ಷಿಸೋಣ. ಚರ್ಚಿಸುತ್ತ ಕುಳಿತು.. ರಾತ್ರಿ ಸಮಯ ಸವೆದದ್ದೇ ಗೊತ್ತಾಗಲಿಲ್ಲ... ಸ್ವಲ್ಪ ಹೊತ್ತು ಮಲಗು ಹೋಗು.

ಪಯೋ : ಸರಿ. (ನಿರಾಳ ರಾತ್ರಿ)



## ದೃಶ್ಯ 17

(ಬೆಳಗಿನ ಸಮಯ, ಪಿರ್‍ಯಾಮಿಡ್‌ಗಳನ್ನು ವೀಕ್ಷಿಸುತ್ತ)

ಥೇಲೀಸ್ : ಪಯೋ....... ನೋಡಲ್ಲಿ ಸೂರ್ಯನ ಬೆಳಗಿನ ಹೊಂಬೆಳಕಿನಲ್ಲಿ ಪಿರಾಮಿಡ್ ನೋಡೋದೇ ಒಂದು ಅದ್ಭುತ ಅಲ್ಲವಾ!?

ಪಯೋ : ಅಬ್ಬಾ! ಎಂತಹ ಅದ್ಭುತ ಅಂತೀರಿ!

ಥೇಲೀಸ್ : ಪಿರಾಮಿಡ್‌ನ ನೆರಳು ನೋಡು ಪಯೋ.... ಬಾ ಈಗ ನೆರಳನ್ನಾಧರಿಸಿ ಪಿರಾಮಿಡ್‌ನ ಎತ್ತರ ಕಂಡುಕೊಳ್ಳುವುದು ಹೇಗೆ ಅಂತಾ ತಿಳೀಬಹುದು.

ಪಯೋ : ಏನ್ ಸ್ವಾಮಿ.. ನೆರಳಿನಿಂದ ಎತ್ತರ ಕಂಡುಕೊಳ್ಳೋದಾ...... ನೆರಳಿಗೂ ಎತ್ತರಕ್ಕೂ ಏನು ಸಂಬಂಧ ಸ್ವಾಮಿ..

ಥೇಲೀಸ್ : ಸಂಬಂಧವಿದೆ ಪಯೋ... ನಿನಗೆ ಇದನ್ನು ತಿಳಿಯೋಕೆ ಆಸಕ್ತಿ ಇದೆ ತಾನೆ..

ಪಯೋ : ಆಸಕ್ತಿ ಏನ್ ಬಂತು.... ಅನುಮಾನಾನೇ ಬೇಡ. ನೆರಳನ್ನು ಆಧರಿಸಿ ಅದ್ಹೇಗೆ ಪಿರಾಮಿಡ್ ಅಳತೆ ಮಾಡ್ತಿರೋ ನಾನೂ ನೋಡಿ ತಿಳೀಬೇಕು... ನಡೀರಿ ಈಗಲೇ ಮಾಡೋಣ.

ಥೇಲೀಸ್ : ನಿಧಾನ.. ನಿಧಾನ... ಅವಸರ ಮಾಡಬೇಡ. ಸೂರ್ಯ ಈಗಿನ್ನು ಮೇಲೆ ಏರ್ತಿದೆ... ಸೂರ್ಯ ಇಷ್ಟೇ ಎತ್ತರದಲ್ಲಿರುವಾಗ ಅಳೆದರೆ ಸುಲಭವಾಗಿ ಕಂಡುಕೊಳ್ಳಬಹುದು ಅಂತ ಒಂದು ಪ್ರಯೋಗ ನನ್ನ ಬಳಿ ಇದೆ. ಕೈಯಲ್ಲೊಂದು ಬೆತ್ತ, ಅಳತೆಯ ಗತ್ತು ಗೊತ್ತಿದ್ರೆ..... ಎಂತಹ ಎತ್ತರವನ್ನು ಅಳೆಯಬಹುದು. ನಿನ್ನೆ ರಾತ್ರಿ ನಾನಿದನ್ನ ಕಂಡುಕೊಂಡೆ. ಒಂದೇ ಅಳತೆಯ ಕೋನಗಳುಳ್ಳ, ಭಿನ್ನ ಅಳತೆಯ ಬಾಹುಗಳುಳ್ಳ ಎರಡು ತ್ರಿಭುಜಗಳ ಹೋಲಿಕೆಯಿಂದ ನಾನಿದನ್ನು ಕಂಡುಕೊಂಡೆ.

ಪಯೋ : ವ್ಹಾ.... ನನ್ನ ಅಜ್ಞಾನಕ್ಕೆ ಇದು ಎಂದೂ ಹೊಳೆದೇ ಇಲ್ಲ. ಅದು ಹೇಗೆ?

ಥೇಲೀಸ್ : ಅಳೆಯೋಣ ಬಾ ಇಲ್ಲಿ.... ಈ ಬೆತ್ತವನ್ನು ಈ ಮರಳಲ್ಲಿ ಊರಿ ನಿಲ್ಲಿಸು.

ಪಯೋ : (ಬೆತ್ತವನ್ನು ತೆಗೆದುಕೊಂಡು ಮರಳಿನಲ್ಲಿ ಊರಿ ನಿಲ್ಲಿಸುತ್ತ) ನಿಲ್ಲಿಸಿದೆ.

ಥೇಲೀಸ್ : ಈಗ ಊರಿದ ಬೆತ್ತದ ಅಳತೆ ಎಷ್ಟಿದೆ ಹೇಳು?

ಪಯೊ : (ಸ್ಕೇಲಿನಿಂದ ಅಳೆಯುತ್ತ) ಮೂರು ಅಡಿ ಇದೆ.

ಥೇಲೀಸ್ : ಈಗ ಈ ಬೆತ್ತದ ನೆರಳನ್ನು ನೋಡು..... ಎಷ್ಟಿದೆ ಅಳೆ......

ಪಯೊ : ಕೋಲಿನ ನೆರಳು ಐದು ಅಡಿ ಇದೆ....

ಥೇಲೀಸ್ : (ನಗುತ್ತ) ಹಾಗಾದ್ರೆ ಅದನ್ನೂ ಮೂರು ಅಡಿ ಮಾಡು...

ಪಯೊ : ಹೇಗೆ ಮಾಡೋದು...?

ಥೇಲೀಸ್ : (ನಗುತ್ತ) ಮಾಡಲು ನಿನಗೆ ಹೇಗೆ ಸಾಧ್ಯ? ಸೂರ್ಯನೇ ಮೇಲೇರಿ ಬರಬೇಕು..

(ಇಬ್ಬರೂ ನಗುವರು)

ಥೇಲೀಸ್ : ನೆಟ್ಟ ಕೋಲಿನಿಂದ ಅದರ ನೆರಳಿನ ಕಡೆಗೆ.... ಕೋಲಿನಷ್ಟೇ ಅಳತೆ ಅಂದರೆ ಮೂರು ಅಡಿಗೆ ಒಂದು ಗುರುತು ಹಾಕು. ನೆರಳು ಯಾವಾಗ ಆ ಗುರುತಿಗೆ ಬರುತ್ತೋ ಆಗ ಪಿರ್‍ಯಾಮಿಡ್ ಕಡೆ ಗಮನ ಹರಿಸಿ ಆ ಕೂಡಲೇ ಅದರ ನೆರಳ ತುದಿಯನ್ನು ಗುರುತಿಸು.

ಪಯೊ : ಸರಿ ಗುರುತಿಸ್ತೀನಿ ಅನಕೊಳ್ಳಿ ಮುಂದೇನು ಮಾಡೋದು.....

ಥೇಲೀಸ್ : ಗುರುತಿಸಿಯಾದ ಮೇಲೆ ಪಿರ್‍ಯಾಮಿಡ್‌ನ ನೆರಳ ತುದಿಯಿಂದ ಪಿರ್‍ಯಾಮಿಡ್‌ನವರೆಗೆ ಅಳತೆ ಮಾಡಿದಾಗ ಅದರ ಎತ್ತರ ತಿಳಿಯುತ್ತದೆ....

ಪಯೋ : (ಯೋಚಿಸುತ್ತ ಎಣಿಕೆ ಹಾಕುತ್ತ) ಸ್ವಾಮಿ ನನಗಿದು ಸ್ಪಷ್ಟವಾಗದು... ಕೋಲಿನಷ್ಟೇ ನೆರಳು ಬಿದ್ದಾಗಲೇ ಏಕೆ ಪಿರ್‍ಯಾಮಿಡ್ ನೆರಳು ಗುರುತಿಸಿ ಅಳೆಯಬೇಕು. ಇದಕ್ಕೂ ಅದಕ್ಕೂ ಏನು ಸಂಬಂಧ.... ಛೆ....... ಒಂಚೂರು ತಲೆಗೆ ಹತ್ತುತ್ತಿಲ್ಲ.



ಥೇಲೀಸ್ : ತಲೆಗೆ ಹತ್ತದಿರುವಂಥದು ಏನೂ ಇಲ್ಲ ಪಯೋ..... ಬಾ ಇಲ್ಲಿ.

(ಬಟ್ಟೆಯ ಮೇಲೆ ಬರೆದ ಚಿತ್ರ ತೋರಿಸುತ್ತ)

ಮರಳಿನಲ್ಲಿ ಲಂಬವಾಗಿ ನೆಟ್ಟ ಕೋಲು ಅದರಷ್ಟೇ ಅಳತೆಯ ನೆರಳು. ಈ ನೆರಳ ತುದಿ ಹಾಗೂ ಕೋಲಿನ ತುದಿ ಸೇರಿಸಿದ ಒಂದು ರೇಖೆ. ಮೇಲಿನ ಎರಡು ಕೋನಗಳು 45 ಡಿಗ್ರಿ ಇವೆ.

ಇದು ನೆಟ್ಟ ಕೋಲು.... ಕೋಲಿನಷ್ಟೇ ನೆರಳು ಬಿದ್ದಾಗಲೇ ಇಲ್ಲಿ ಗುರುತು ಹಾಕಿದೆ. ಕೋಲು ಒಂದು ರೇಖೆಯಾದರೆ. ಕೋಲಿನ ಕೆಳ ತುದಿಯಿಂದ ಗುರುತಿಸಿದ ಬಿಂದುವಿಗೆ ಎಳೆದ ಗೆರೆ ಇನ್ನೊಂದು ಬಾಹು.... ಕೋಲಿನ ಮೇಲು ತುದಿ ಹಾಗೂ ಗುರುತಿಸಿದ ಬಿಂದು ಸೇರಿಸಿದಾಗ ಒಂದು ತ್ರಿಕೋನ ರಚನೆಯಾಯಿತು. ಕೋಲನ್ನು ಲಂಬವಾಗಿ ನೆಟ್ಟಿರುವುದರಿಂದ ಇದು ಲಂಬಕೋನವಾಗಿದೆ. ಇದಕ್ಕೆ ಹೊಂದಿಕೊಂಡಿರುವ ಕೆಳಭಾಗದ ಬಾಹು ಕೋಲಿನಷ್ಟೇ ಅಳತೆ ಇರುವುದರಿಂದ ಇದು ಸಮದ್ವಿಬಾಹು ತ್ರಿಭುಜವಾಯ್ತಲ್ಲವೆ?

ಪಯೋ : ಹೌದು



ಥೇಲೀಸ್ : ಒಂದು ಕೋನ ಲಂಬ ಕೋನವಾದರೆ ಉಳಿದ ಎರಡು ಕೋನಗಳು 45 ಡಿಗ್ರಿ....... ಹೀಗೆ ಎರಡು ಕೋನಗಳು 45 ಡಿಗ್ರಿ ಇರುವ ಸಮ ಕೋನಗಳಾಗಿದ್ದು ಒಂದು ಲಂಬಕೋನವಾಗಿದ್ದರೆ; ಲಂಬಕೋನಕ್ಕೆ ಹೊಂದಿಕೊಂಡಿರುವ ಎರಡು ಬಾಹುಗಳು ಸಮವಾಗಿರುತ್ತವೆ. ಇದನ್ನೇ ಆಧಾರವಾಗಿಟ್ಟು ನೆರಳನ್ನು ಸುಲಭವಾಗಿ ಅಳೆಯಬಹುದು. ಎರಡು ಕೋನಗಳು 45 ಡಿಗ್ರಿ ಇದ್ದರೆ ಉಳಿದೆರಡು ಬಾಹುಗಳು ಸಮ ಎನ್ನುವುದನ್ನೇ ಆಧಾರವಾಗಿಟ್ಟುಕೊಂಡು; ನೆರಳನ್ನಾಧರಿಸಿ ನಿರ್ಮಿಸಿಕೊಂಡ ಚಿಕ್ಕ ತ್ರಿಭುಜದ ಹೋಲಿಕೆಯೊಂದಿಗೆ ಯಾವುದೇ ಗೋಪುರ, ಮರ, ಪಿರ್‍ಯಾಮಿಡ್ ಮೊದಲಾದವುಗಳ ಅಳತೆ ಅಂದಾಜಿಸಬಹುದಾಗಿದೆ.

ಪಯೋ : ಓಹೊ..... ನೆಟ್ಟ ಕೋಲು ಮೂರು ಅಡಿ... ಅದಕ್ಕೆ ಹೊಂದಿಕೊಂಡು ಲಂಬವಾಗಿರುವ ನೆರಳಗುಂಟ ಎಳೆದ ಬಾಹು ಕೂಡ ಸಮವಾಗಿರುವುದರಿಂದ ಅದೂ ಕೂಡ ಮೂರಡಿ........ ಓಹೋ ಈಗ ಅರ್ಥವಾಯ್ತು ನೆರಳಿನಷ್ಟೇ ಅದರ ಎತ್ತರ ಎಂದು ಸ್ಪಷ್ಟವಾಯ್ತು...

ಥೇಲೀಸ್ : ಹಾಂ ಅದಕ್ಕೇ ನೆಟ್ಟ ಕೋಲಿನಷ್ಟೇ ನೆರಳು ಬರುವವರೆಗೆ ಕಾಯ್ದದ್ದು.... ಎರಡು ಕೋನಗಳು 45 ಡಿಗ್ರಿ ಆಯ್ತಾ ಆಗ ಈ ಎರಡೂ ಕೋನಗಳಿಗೆ ಹೊಂದಿಕೊಂಡು ಬೆಳೆದ ಎರಡೂ ಬಾಹುಗಳು ಸಮವಾಗಿದ್ದು ಇನ್ನೊಂದು ಕೋನ ಲಂಬ ಕೋನ. ಹಾಗಾಗಿ ಗುರುತು ಹಾಕಿದ ಜಾಗದಿಂದ ಈಗ ಪಿರ್‍ಯಾಮಿಡ್‌ನ ನೆರಳನ್ನು ಅಳೆದರೆ ಅದೇ ಆ ಪಿರ್‍ಯಾಮಿಡ್‌ನ ಎತ್ತರವಾಗಿರುತ್ತದೆ. ಈಗ ನೆರಳ ತುದಿಯಿಂದ ಪಿರಾಮಿಡ್‌ನ ಮಧ್ಯ ಭಾಗದವರೆಗೆ ಎಷ್ಟು ಬೆತ್ತ ಇದೆ. ಅಳೆದುಕೊಂಡು ಬಾ.... 'ಒಂದು ಬೆತ್ತ ಮೂರು ಅಡಿ'

ಪಿರ್‍ಯಾಮಿಡ್‌ನ ನೆರಳು ಬಿದ್ದಿದೆ. ಪಯೋ ಕೋಲೊಂದನ್ನು ಹಿಡಿದು ಪಿರ್‍ಯಾಮಿಡ್‌ನ ನೆರಳ ತುದಿಯಿಂದ ಪಿರ್‍ಯಾಮಿಡ್‌ನ ಕಡೆಗೆ ಅಳೆಯುತ್ತಿದ್ದಾನೆ.

ಪಯೊ : (ಅಳೆಯುತ್ತ ಸಾಗಿ ತೇಕುತ್ತ ಬಂದು) ಸ್ವಾಮಿ 160 ಬೆತ್ತ ಆಯ್ತು..

ಥೇಲೀಸ್ : ಹಾಗಾದರೆ ಒಂದು ಬೆತ್ತ ಮೂರು ಅಡಿಯಾದರೆ 160 ಬೆತ್ತ.... ಅಂದರೆ 480 ಅಡಿಯಾಯ್ತು.



ಪಯೋ : ಹಾಗಾದರೆ ಪಿರ್‍ಯಾಮಿಡ್‌ನ ಎತ್ತರ 480 ಅಡಿ.

ಥೇಲೀಸ್ : ಹಾಂ. ಹೌದು. ಹೀಗೆ ಒಂದೇ ಅಳತೆಯ ಕೋನಗಳನ್ನು ಹೊಂದಿರುವ ಭಿನ್ನ ಅಳತೆಯ ಬಾಹುಗಳನ್ನು ಹೊಂದಿರುವ ಎರಡು ಕೋನಗಳ ಹೋಲಿಕೆಯ ಆಧಾರದಿಂದ ಈ ಲೆಕ್ಕಾಚಾರ ಮಾಡಬಹುದು.

(ಥೇಲೀಸ್ ಮುಗುಳ್ನಕ್ಕ.... ಮಕ್ಕಳು ರಂಗದ ಮೇಲೆ ಓಡಿ ಬಂದು ಅಜ್ಜನನ್ನು ಮುತ್ತುವರು)

ಮಕ್ಕಳು : ಅಜ್ಜ, ಅಜ್ಜ ನಮಗೆ ಇನ್ನೂ ಸ್ಪಷ್ಟವಾಗಿ ತಿಳಿಯೋ ಹಾಗೆ ಹೇಳಿ ಅಜ್ಜ....

ಥೇಲೀಸ್ : ಎಲ್ಲವನ್ನು ರಂಗದ ಮೇಲೆ ಹೇಳೋದಿಕ್ಕೆ ಆಗ್ಲೋದಿಲ್ಲ ಮಕ್ಕಳೆ, ಹೀಗೆ ಚಿಕಿತ್ಸಕ ಬುದ್ಧಿಯಿಂದ, ಪ್ರಾಯೋಗಿಕ ಕಾರ್ಯದೊಂದಿಗೆ, ತರ್ಕಿಸಿ ತಿಳಿಬೇಕು. ಬನ್ನಿ ನೀವು ನಮಗಿಂತ ಬುದ್ಧಿವಂತರಿದ್ದೀರಿ. ಪ್ರಯತ್ನ ಬೇಕು ಅಷ್ಟೆ. ಇದೇ ರೀತಿ ಮೈದಾನದಲ್ಲಿ ನಿಮ್ಮ ಜಮೀನಿನಲ್ಲಿ ಇರೋ ಮರಗಳನ್ನು ಅಳತೆ ಮಾಡಿ ನೋಡಿ.

ಮಕ್ಕಳು : ಆಯ್ತಜ್ಜ ಮಾಡ್ತಿವಿ..... (ಎಲ್ಲರೂ ಹಾಡಿ ಕುಣಿವರು.)

**ಕಲಿಯೋಣ ಬನ್ನಿರೊ**
**ನಲಿಯೋಣ ಬನ್ನಿರೋ**
**ನಲಿಯುತ್ತ ಕಲಿಯುತ್ತ**
**ಕುಣಿಯೋಣ ಬನ್ನಿರೊ**

**ಬಯಲಿಗೆ ಬನ್ನಿರೊ**
**ಭಾವಗಳ ಬಿಚ್ಚಿರೊ.**
**ಹೊಸ ನೋಟದ ಹೊಸ ಆಟವ**
**ಹೊಸೆಯೋಣ ಬನ್ನಿರೊ**

************

ಮಿಲೇಟಸ್ ನಗರದ ಅಲೆಮಾರಿ ಮುದುಕ

# ಥೇಲೀಸ್

ವಿ.ಎಸ್.ಎಸ್.ಶಾಸ್ತ್ರಿ

ಚಿತ್ರ ಕಲಾವಿದ

ಶಿವಣ್ಣ ಜಿ ಕೆ



ಭಾರತ ಜ್ಞಾನ ವಿಜ್ಞಾನ ಸಮಿತಿ–ಕರ್ನಾಟಕ

**Bharat Gyan Vigyan Samiti - Karnataka**

ಬೆಂಗಳೂರು • Bengaluru

*Miletus Nagarada Alemari Muduka Thales*
by V S S Sastry

*Illustration*
Shivanna GK

*Cover Design*
Shivanna GK

*Layout Design*
Murali K, Print Hut

*First Edition* August 2004
*Second Edition* 2011
*Third Edition* October 2020

*Print run* 3000

*Price* 70 INR



*Printed at*
Print Hut
Govindarajnagar, Bengaluru

*Published by*

Bharat Gyan Vigyan Samiti (BGVS) - Karnataka
Second Floor, Old Chemical Engineering Building
Indian Institute of Science, Bengaluru 560 012
bgvskarnataka@gmail.com



ಪ್ರಿಯ ಓದುಗರೇ,

ಥೇಲೀಸ್ (THAY-leez or Thales) ಒಬ್ಬ ಗ್ರೀಕ್ ಗಣಿತಶಾಸ್ತ್ರಜ್ಞ, ಖಗೋಳಶಾಸ್ತ್ರಜ್ಞ ಮತ್ತು ಸಾಕ್ರಟೀಸ್‌ಗಿಂತಲೂ ಹಿಂದಿನ ತತ್ವಶಾಸ್ತ್ರಜ್ಞನೂ ಹೌದು. ಆತ ಸುಮಾರು ಕ್ರಿಸ್ತ ಪೂರ್ವ 624 ರಿಂದ ಕ್ರಿಸ್ತ ಪೂರ್ವ 548 ರ ನಡುವೆ ಗ್ರೀಸ್ ದೇಶದ ಮಿಲೇಟಸ್‌ನಲ್ಲಿ ಬದುಕಿದ್ದ. ಅರಿಸ್ಟಾಟಲ್ ಮೊದಲಾದ ಅನೇಕರು ಥೇಲೀಸ್‌ನನ್ನು ಗ್ರೀಕ್ ಪರಂಪರೆಯ ಮೊದಲ ತತ್ವಶಾಸ್ತ್ರಜ್ಞ ಎಂದು ಕರೆದಿದ್ದಾರೆ.

ಪುರಾಣಗಳ ಮೂಲಕ ಜಗತ್ತನ್ನು ಮತ್ತು ವಿಶ್ವವನ್ನು ನೋಡುವ ವಿಧಾನವನ್ನು ಮುರಿದ ಮೊದಲಿಗ ಎಂದು ಥೇಲೀಸ್‌ನನ್ನು ಗುರುತಿಸುತ್ತಾರೆ. ಪ್ರಕೃತಿಯಲ್ಲಿ ಕಂಡುಬರುವ ವಸ್ತು ಮತ್ತು ವಿಚಾರಗಳನ್ನು, ನೈಸರ್ಗಿಕ ಸಿದ್ಧಾಂತ ಮತ್ತು ಕಲ್ಪನೆಗಳ ಮೂಲಕ ನೋಡುವ ವಿಧಾನವನ್ನು ಆತ ಆಧುನಿಕ ವಿಜ್ಞಾನಕ್ಕೂ ಪೂರ್ವದಲ್ಲಿ ಪ್ರಾರಂಭಿಸಿದ. ರೇಖಾಗಣಿತದ ಬಳಕೆಯ ಮೂಲಕ ಪಿರಮಿಡ್‌ನ ಎತ್ತರ ಕಂಡುಹಿಡಿಯುವುದು, ಸಮುದ್ರತೀರದಿಂದ ಹಡಗು ಇರುವ ದೂರವನ್ನು ಕಂಡುಹಿಡಿಯುವುದು, ಮೊದಲಾದವುಗಳನ್ನು ಥೇಲೀಸ್ ಗಣಿತಶಾಸ್ತ್ರದಲ್ಲಿ ಬಳಕೆಗೆ ತಂದ. ರೇಖಾಗಣಿತದಲ್ಲಿ ತಾರ್ಕಿಕ ವಿಧಾನಗಳನ್ನು ಬಳಕೆಗೆ ತಂದವರಲ್ಲಿ ಆತ ಮೊದಲಿಗನೂ ಹೌದು.

ಥೇಲೀಸ್‌ನ ಗಣಿತಶಾಸ್ತ್ರ ಮತ್ತು ಯೋಚನಾ ವಿಧಾನಗಳನ್ನು ಈ ಪುಸ್ತಕ ನಮಗೆ ಪರಿಚಯಿಸುತ್ತದೆ.

**ಪ್ರಕಟಣಾ ಉಪ ಸಮಿತಿ**
ಭಾರತ ಜ್ಞಾನ ವಿಜ್ಞಾನ ಸಮಿತಿ, ಕರ್ನಾಟಕ

ವಿ.ಎಸ್.ಎಸ್.ಶಾಸ್ತ್ರಿ ಇವರು ಗಣಿತ ಮತ್ತು ವಿಜ್ಞಾನ ಸಂವಹನಕಾರರು ಮತ್ತು ಬಹಳ ವರ್ಷಗಳಿಂದ ಜನ ವಿಜ್ಞಾನ ಚಳುವಳಿಯ ಜೊತೆಗಿರುವವರು. ಇವರೊಬ್ಬ ಸೃಜನಶೀಲ ಒರಿಗಾಮಿ ಮತ್ತು ಕಿರಿಗಾಮಿ ಕಲಾವಿದರು. ಕಾಗದ ಮತ್ತು ಗೊಂಬೆಗಳ ಮೂಲಕ ವಿಜ್ಞಾನ ಮತ್ತು ಗಣಿತವನ್ನು ಕಲಿಸುವ ಆಸಕ್ತರು. ಇವರು ಕೋಲಾರದಲ್ಲಿ ವಾಸವಾಗಿದ್ದಾರೆ.

ಶಿವಣ್ಣ ಜಿ.ಕೆ. ಅವರು ತಮ್ಮ ಸರ್ಕಾರಿ ವೃತ್ತಿಜೀವನದ ಒಟ್ಟು 18 ವರ್ಷಗಳಲ್ಲಿ 15 ವರ್ಷಗಳು ಸಾರ್ವಜನಿಕ ಶಿಕ್ಷಣ ಇಲಾಖೆಯು ಹೊರತರುತ್ತಿರುವ ಶಿಕ್ಷಣವಾರ್ತೆ ಶೈಕ್ಷಣಿಕ ಮಾಸಪತ್ರಿಕೆಯ ವಿನ್ಯಾಸಕರಾಗಿ ಕಲಾವಿದರಾಗಿ ಕೆಲಸ ಮಾಡಿ ನಿವೃತ್ತರಾಗಿದ್ದಾರೆ. ಶಿವಣ್ಣ ಅವರು ತಮ್ಮ ವಿಶಿಷ್ಟ ರೇಖಾಚಿತ್ರಗಳಿಂದ ಪ್ರಸಿದ್ದರಾಗಿದ್ದಾರೆ. ಪ್ರಜಾವಾಣಿ, ಉದಯವಾಣಿ, ಸುಧಾ, ತರಂಗ ಪತ್ರಿಕೆಗಳಲ್ಲಿ ಇವರ ಚಿತ್ರಗಳು ಪ್ರಕಟಗೊಂಡಿವೆ.



# ಗಣಿತಜ್ಞ ಥೇಲೀಸ್



ಥೇಲೀಸ್ (THAL-leez) ಎಂಬ ಗಣಿತಜ್ಞ ಗ್ರೀಕ್ ದೇಶದವನು. ಇವನು ಕ್ರಿ.ಪೂ.636 ರಿಂದ 546ರವರೆಗೆ ಮಿಲೇಟಸ್ ನಗರದಲ್ಲಿ ಜೀವಿಸಿದ್ದ. ತನ್ನ ಬುದ್ಧಿಮತ್ತೆಗೂ, ಕುಶಾಗ್ರಮತಿಗೂ ಪ್ರಸಿದ್ಧನಾಗಿದ್ದನು.

ಗ್ರೀಕ್ ಪರಂಪರೆಯ ಏಳು ಮೇಧಾವಿಗಳಲ್ಲಿ (seven wisemen) ಇವನೇ ಮೊದಲಿಗನು.

ಗಣಿತವನ್ನು ಕಾರ್ಯಚಟುವಟಿಕೆಯಿಂದ ಬಿಡಿಸಿ, ಅಮೂರ್ತವಾಗಿ ನೋಡಿದ ಮೊದಲಿಗ ಥೇಲೀಸ್. ಅಂದರೆ ಅದುವರೆಗೂ ಭೂಮಾಪನಕ್ಕಾಗಿ ಮಾತ್ರ ಬಳಕೆಯಾಗುತ್ತಿದ್ದ ಜ್ಯಾಮಿತಿಯನ್ನು, ರೇಖಾಗಣಿತದ ಜ್ಞಾನಶಿಸ್ತಾಗಿ ಮೊದಲ ಬಾರಿಗೆ ಕಂಡುಕೊಂಡು ಪ್ರಚುರಪಡಿಸಿದ.

ಗಣಿತ ಚರಿತ್ರೆಯಲ್ಲಿ ಈ ಕೆಳಗಿನ ಪ್ರಮೇಯಗಳನ್ನು ನೀಡಿದ.

ಅ. ಒಂದು ವ್ಯಾಸವು ತನ್ನ ವೃತ್ತವನ್ನು ಅರ್ಧಿಸುತ್ತದೆ.

ಆ. ಸಮದ್ವಿಬಾಹು ತ್ರಿಭುಜದ ತಳದ ಅಭಿಮುಖ ಕೋನಗಳು ಸಮವಾಗಿರುತ್ತವೆ.

ಇ. ಎರಡು ಸರಳರೇಖೆಗಳು ಅರ್ಧಿಸಿದಾಗ ಉಂಟಾಗುವ ಅಭಿಮುಖ ಕೋನಗಳು ಸಮನಾಗಿರುತ್ತವೆ.

ಈ. ಒಂದು ಅರ್ಧ ವೃತ್ತದ ಪರಿಧಿಯಲ್ಲಿ, ವ್ಯಾಸದಿಂದ ಏರ್ಪಡುವ ಕೋನವು, ಲಂಭಕೋನವಾಗಿರುತ್ತದೆ.

ಥೇಲೀಸ್‌ನ ಆಸಕ್ತಿಗಳು ಅನೇಕ ತತ್ವಜ್ಞಾನಿ, ರಾಜಕಾರಣಿ, ವ್ಯಾಪಾರಿ, ಇಂಜಿನಿಯರ್ ಈ ಎಲ್ಲವೂ ಆಗಿದ್ದ. ಥೇಲೀಸನಿಗೆ ಸೂಕ್ಷ್ಮನೋಟವು ವೈಚಾರಿಕ ನಿಲುವೂ ಇದ್ದವು. ಗ್ರೀಕ್ ದೇಶದ ಪಟ್ಟಣಗಳಲ್ಲಿ ಬಹಳ ಜನಪ್ರಿಯನಾಗಿದ್ದ ಥೇಲೀಸ್ ಬಹಳ ಬಡವನಾಗಿದ್ದ.

ಥೇಲೀಸ್ ಹಿತೈಷಿಗಳು ಇವನ ಬಡತನವನ್ನು ನೋಡಿ ಮರುಗಿದ್ದರು. ಅವರ ಅಸಹಾಯಕತೆಯನ್ನು ಕಂಡು ಥೇಲೀಸ್ ಹೀಗೆ ಹೇಳಿದನಂತೆ, "ಹಣ ಮಾಡುವುದು ಕಷ್ಟವಲ್ಲ, ಅದರತ್ತ ನಾನು ಮನಸ್ಸು ಮಾಡಿಲ್ಲ ಅಷ್ಟೇ. ಆರು ತಿಂಗಳು ಬಿಟ್ಟು ಬನ್ನಿ ಹಣ ಮಾಡುವುದು ಎಷ್ಟು ಸುಲಭವೆಂದು ತೋರಿಸುತ್ತೇನೆ".

ಹಾಗೆಯೇ ಎಣ್ಣೆ ವ್ಯಾಪಾರ ಮಾಡಿ ಹಣ ಸಂಪಾದಿಸಿದನಂತೆ. ಆ ಹಣವನ್ನು ಸ್ನೇಹಿತರಿಗೆ ಹಂಚಿಬಿಟ್ಟು "ಹಣವಿದ್ದರೆ ನನ್ನ ಜ್ಞಾನಾರ್ಜನೆಗೆ, ಅಲೋಚನೆಗಳಿಗೆ ಅಡ್ಡಿಯಾಗುತ್ತದೆ" ಎಂದು ಹೇಳಿದನಂತೆ.

ಯಾರೋ ಕೇಳಿದರು "ಒಳ್ಳೆಯ ನಾಗರಿಕರಾಗುವುದು ಹೇಗೆ?" ಥೇಲೀಸ್ ಹೇಳಿದ "ಬಹಳ ಸುಲಭ, ನಾವು ಇತರರನ್ನು ದೋಷಿಸುತ್ತೇವಲ್ಲಾ ಅದೇ ಕೆಲಸಗಳನ್ನು ನಾವು ಮಾಡದಿದ್ದರಾಯ್ತು."

ಹೀಗೆ ಇವನ ತೀಕ್ಷ್ಣ ಉತ್ತರಗಳೂ, ಬುದ್ಧಿವಂತಿಕೆಯ ಕಾರ್ಯಗಳೂ ಗ್ರೀಕರ ಜನಪದ ಕಥೆಗಳಲ್ಲಿ ಸೇರಿಹೋಗಿವೆ. ಈಸೋಪನ ಹಲವು ನೀತಿಕಥೆಗಳ ನಾಯಕನೂ ಥೇಲೀಸ್‌ನೇ.



ಗ್ರೀಕ್ ಜನಪದ ಕಥೆಗಳಲ್ಲಿ, ನೆರಳಿನಜಾಡು ಹಿಡಿದು, ಪಿರಮಿಡ್‌ನ ಎತ್ತರದ ಲೆಕ್ಕ ಹಾಕಿದ ಕಥೆ ಬಹಳ ಪ್ರಸಿದ್ಧವಾದದ್ದು. ಥೇಲೀಸನು ಗ್ರಹಣಗಳ ಬಗ್ಗೆ ಕರಾರುವಕ್ಕಾಗಿ ಲೆಕ್ಕ ಹಾಕಿ ಹೇಳಬಲ್ಲವನಾಗಿದ್ದ. ಒಮ್ಮೆ ಎರಡು ಗ್ರೀಕ್ ಪಟ್ಟಣಗಳಾದ, ಲೀಡಿಯಾ ಮತ್ತು ಮೇಡಿಸ್‌ಗಳ ನಡುವೆ ಆರು ವರ್ಷಗಳ ಕಾಲ ಕದನವಾಯ್ತು. ಥೇಲೀಸ್ ಯುದ್ಧ ನಿಲ್ಲಿಸಲು ಮನವಿ ಮಾಡಿದ. ಇಬ್ಬರೂ ನಿರಾಕರಿಸಿ, ನಿರ್ಣಾಯಕ ಯುದ್ಧಕ್ಕೆ ಒಂದು ದಿನವನ್ನು ಗೊತ್ತುಪಡಿಸಿಕೊಂಡರು. ಅಂದು ಸೂರ್ಯಗ್ರಹಣವಾಗುತ್ತದೆಂದು ಥೇಲೀಸ್ ಹೇಳಿದ ಮಾತಿಗೆ ಅವರು ಸೊಪ್ಪು ಹಾಕಲಿಲ್ಲ. ಆ ದಿನ ಥೇಲೀಸ್ ಯುದ್ಧ ಭೂಮಿಯಲ್ಲಿ ನಿಂತ. ನಿಗದಿತ ವೇಳೆಗೆ ಸೂರ್ಯ ಮರೆಯಾದ. ಎರಡೂ ಕಡೆಯ ಸೈನಿಕರು ಕಂಗಾಲಾದರು. ಯುದ್ಧ ಮಾಡುವುದಿಲ್ಲವೆಂದು ಶಾಂತಿಕರಾರು ಮಾಡಿಕೊಂಡರು.

ಹೀಗೆ ಥೇಲೀಸನ ಬಗ್ಗೆ ನೂರಾರು ಕಥೆಗಳಿವೆ. ಈ ಮೇದಾವಿಯು ತಾನು ಜೀವಿಸಿದ್ದ ಕಾಲಾವಧಿಯಲ್ಲಿ ಅನೇಕ ಚಾಣಾಕ್ಷರಿಗೆ ತಯಾರಿ ನೀಡಿದ್ದ. ಆದರೆ ಥೇಲೀಸನ ಗಣಿತವೆಲ್ಲಾ ಪ್ರಾಯೋಗಿಕವಾದದ್ದು. ತಾರ್ಕಿಕ ಕೊಂಡಿಯನ್ನು ಶೋಧಿಸಿ ಒಂದು ಪ್ರಮೇಯದಿಂದ ಮತ್ತೊಂದು ಪ್ರಮೇಯಕ್ಕೆ ಸಂಬಂಧ ಬೆಳೆಸಿಕೊಳ್ಳುವುದು ಥೇಲೀಸನಿಗೆ ಒಗ್ಗಲಿಲ್ಲ. ಆದರೆ ಇವನ ನಂತರ ಬಂದ ಗಣಿತಜ್ಞರು ಇದನ್ನು ಸಾಧಿಸಿದರು.

ಪ್ಲೂಟಾರ್ಕ್ ಎಂಬ ಚರಿತ್ರಕಾರ ಥೇಲೀಸ್‌ಗೆ ಒಂದು ಬಿಂದುವಿನಿಂದ ರೇಖೆಯೊಂದಕ್ಕೆ ಲಂಬರೇಖೆ ಎಳೆಯಬಹುದೆಂದು ತಿಳಿದಿರಲಿಲ್ಲವೆಂದು ಹೇಳುತ್ತಾನೆ. ಬಹುಶಃ ಈ ಬಗೆಯ ಸಮಸ್ಯೆಯೇ ಅವನಿಗೆ ಬರದಿರಬಹುದು.

ಥೇಲೀಸನ ಜೀವನ, ಅವನು ಗಣಿತ ವಿಶ್ಲೇಷಿಸಿದ ರೀತಿ ಅನೇಕ ಕಥೆಗಳಲ್ಲಿ ಹಂಚಿಹೋಗಿದೆ. ದೇವರು, ದಿಂಡರು, ಪುರೋಹಿತರ ಸಖ್ಯ ಮಾಡದ ಈತ, ಗಣಿತ ತತ್ವಗಳನ್ನು ತನ್ನ ಸುತ್ತಲಿನ ಪ್ರಪಂಚದಲ್ಲಿ ಮತ್ತು ಪ್ರಾಯೋಗಿಕ ಅನುಭವದಿಂದ ಅರಿಯಲು ಹೆಣಗಿದನೆಂಬುದು ನಮಗೆ ಮುಖ್ಯವಾಗುತ್ತದೆ. ಮಕ್ಕಳಿಗಾಗಿ ಇವನ ಕುರಿತು ಲಭ್ಯವಿರುವ ಬಿಡಿ ಬಿಡಿ ಕಥೆಗಳನ್ನು ಪೋಣಿಸಿ "ಮಿಲೇಟಸ್‌ನ ಅಲೆಮಾರಿ ಮುದುಕ ಥೇಲೀಸ್" ಚಿತ್ರಿಸಲಾಗಿದೆ.

# ಮಿಲೇಟಸ್ ನಗರದ ಅಲೆಮಾರಿ ಮುದುಕ ಥೇಲೀಸ್

**** 1 ****

"ಕೊನೆಗೂ ಹೊರಟೇ ಬಿಟ್ಟ ನೋಡಿ" ಎಂದರು ಒಬ್ಬರು.

"ಎಷ್ಟು ಹೇಳಿದರೂ ಹಠ ಬಿಡಲಿಲ್ಲ. ಅಲೆಕ್ಸಾಂಡ್ರಿಯಾದಲ್ಲಿ ಇವನು ಕಡಿದು ಕಟ್ಟೆಹಾಕುವುದು ಅಷ್ಟರಲ್ಲೇ ಇದೆ."

"ಹೌದು– ಇಲ್ಲೇನೋ ಎಲ್ಲರ ಪರಿಚಯ ಇದೆ. ಇವನ ಹುಚ್ಚಾಟಗಳಿಗೆ ತಾಳಿಕೊಳ್ಳುವವರಿದ್ದಾರೆ. ಆದರೆ ಅಲ್ಲಿ, ಅವರ ಈಜಿಪ್ಟಿನ ಭಾಷೆ, ಬರವಣಿಗೆ ಎಲ್ಲಾ ಬೇರೆ ತರಹ. ಇವನನ್ನು ಅಲ್ಲಿ ಗುರುತಿಸುವವರಾರು" ಎಂದರು ಮತ್ತೊಬ್ಬರು.

ಈಜಿಪ್ಟ್, ಅಲೆಕ್ಸಾಂಡ್ರಿಯ, ಹಠಮಾರಿತನ ಈ ಪದಗಳು ಅಂದೇ ಮಿಲೇಟಸ್ ನಗರಕ್ಕೆ ಬಂದಿದ್ದ ಪಯೋ ಎಂಬ ಯುವಕನ ಕಿವಿಗೆ ಬಿದ್ದವು. ತಾವು ಹುಡುಕುತ್ತಿದ್ದ ಥೇಲೀಸ್‌ನ ಬಗ್ಗೆ ಇವರು ಮಾತನಾಡುತ್ತಿದ್ದಾರೆಂದು ಅವನಿಗೆ ಅನ್ನಿಸಿತು.

"ಮಹಾಶಯರೇ ನೀವು ಗಣಿತಜ್ಞ ಥೇಲೀಸ್‌ರ ಬಗ್ಗೆ ಮಾತನಾಡುತ್ತಿದ್ದೀರಾ. ಅವರೆಲ್ಲಿದ್ದಾರೆ ಈಗ" ಎಂದ.

"ನೀವು ಆ ಅರೆಹುಚ್ಚ ಮುದುಕನನ್ನು ಹುಡುಕುತ್ತಿದ್ದೀರಾ! ಅವನು ನೋಡಿ ಅಲ್ಲಿ ಡಜನ್ ಕತ್ತೆಗಳ ಮೇಲೆ ಎಣ್ಣೆ ಹೇರಿಕೊಂಡು ಹೊರಟಿದ್ದಾನೆ. ಅವನ ಜೊತೆಗೆ ಯಾರೂ ಇಲ್ಲ. ಯಾರು ಹೋಗಲು ತಯಾರಿಲ್ಲ. ಒಬ್ಬನೇ ಹೊರಟಿದ್ದಾನೆ" ಎಂದರು ಜನ.

ಪಯೋ ಊರ ಹೊರಗಿನ ರಸ್ತೆಯತ್ತ ಓಡಿದ.....

ಒಂದರ ಹಿಂದೊಂದು ಕತ್ತೆಗಳ ಮೆರವಣಿಗೆ. ಅವುಗಳ ಮೇಲೆ ಹೇರಿದ ಆಲೀವ್ ಎಣ್ಣೆ ಜಾಡಿಗಳ ಸರಕು. ಮುಂಭಾಗದಲ್ಲಿ ಏನನ್ನೋ ಗುನುಗುನಿಸುತ್ತಾ ಖುಷಿಯಿಂದ ನಡೆಯುತ್ತಿರುವ ಮುದುಕ. ನೀಳಗಡ್ಡ, ಮೀಸೆ ಬೋಳಿಸಿದ ಬೆಳ್ಳಂಬೆಳಕಿನ ಮುಖ, ನೀಲಿಕಣ್ಣು, ಕೈಯ್ಯಲ್ಲೊಂದು ಊರುಗೋಲು.

"ಮಾನ್ಯರೇ, ನಿಲ್ಲಿ, ನಿಮ್ಮನ್ನು ಕಾಣಲು ಪರ ಊರಿನಿಂದ ಬಂದಿದ್ದೇನೆ. ಸ್ವಲ್ಪ ತಡೆಯಿರಿ" ಎಂದ ಪಯೋ.



"ಓಹೋ ಪರ ಊರಿನವನೋ. ನೋಡು ನಿಂತೆ" ಎಂದ ಥೇಲೀಸ್.

"ನಮಸ್ಕಾರ ಮಾನ್ಯರೇ. ನನ್ನ ಹೆಸರು ಪಯೋ. ಜ್ಞಾನದಾಹದಿಂದ ನಿಮ್ಮ ಬಳಿ ಬಂದಿದ್ದೇನೆ" ಎಂದ.



"ಸರಿ, ಈಗ ನೋಡಿದ್ದಾಯಿತಲ್ಲ, ಹೊರಡು. ನನ್ನ ಹಾದಿಗೆ ಅಡ್ಡ ಬರಬೇಡ" ಎಂದ ಥೇಲೀಸ್.

"ಮಹಾಶಯ. ನನ್ನನ್ನು ದೂರವಿಡಬೇಡಿ. ನಾನು ನಿಮ್ಮ ಬಳಿ ಕೆಲವು ವಿಚಾರಗಳನ್ನು ತಿಳಿಯಲು ಬಂದಿದ್ದೇನೆ. ನಿಮ್ಮ ಜೊತೆ ನಾನೂ ಪಯಣಿಸಬಹುದೇ. ನಿಮ್ಮ ಕತ್ತೆಗಳನ್ನು ಪಯಣದಲ್ಲಿ ದಣಿಯದಂತೆ ನೋಡಿಕೊಳ್ಳುವ ಕೆಲಸ ನನಗೊಪ್ಪಿಸಿ. ನಿಮ್ಮೊಡನೆ ಯಾರೂ ಜೊತೆಯಲ್ಲಿಲ್ಲವೆಂಬುದನ್ನು ನಾನು ಕಂಡಿದ್ದೇನೆ" ಎಂದು ದೈನ್ಯದಿಂದ ಬೇಡಿದ ಪಯೋ.

"ಥೇಲೀಸ್ ನಿಂತು ಒಮ್ಮೆ ಗಡ್ಡ ನೀವಿಕೊಂಡು" ಸರಿ ನನ್ನ ವ್ಯಾಪಾರದಲ್ಲಿ ಪಾಲು ಕೇಳಬೇಡ. ಬರುವುದಿದ್ದರೆ, ಸಾಥಿಕೊಡುವ ಇಚ್ಛೆ ಇದ್ದರೆ ಬಾ, ನಾವು ಅಲೆಕ್ಸಾಂಡ್ರಿಯಾದಿಂದ ಆಚೆ ಸಾವಿನ ಕಣಿವೆಯವರೆಗೆ ಹೋಗಿ ಬರುವವರೆಗೂ ನನ್ನ ಜೊತೆ ಇರಬೇಕು. ನೀನು ಹೇಳಿದ ಕೆಲಸವನ್ನೇ ಮಾಡು. ನನಗೂ ಕೊಂಚ ಯೋಚಿಸಲು ಸಮಯ ದೊರೆತೀತು" ಎಂದ.

ಖುಷಿಯಾಯಿತು ಪಯೋಗೆ. ಸಧ್ಯ ಈ ಮುದುಕ ಒಪ್ಪಿದನಲ್ಲಾ ಏನೆಂದರೂ ಒಂದು ವರ್ಷ ಬೇಕು ಈಜಿಪ್ಟ್‌ನ ಸಾವಿನ ಕಣಿವೆಗೆ ಹೋಗಿ ಬರಲು. ಅಷ್ಟು ದಿನ ಈ ಮೇಧಾವಿಯೊಡನೆ ಕಾಲ ಕಳೆಯಬಹುದಲ್ಲಾ ಎಂದು ಸಂತಸ ಅವನಿಗೆ.

**** 2 ****

ಕೆಲವು ದಿನಗಳು ಕಳೆದವು. ಇಬ್ಬರೂ ನಡೆಯತ್ತಲೇ ಇದ್ದರು. ದಣಿವು ತಿಳಿಯಲಿಲ್ಲ ಪಯೋಗೆ. ಥೇಲೀಸ್‌ನ ಅರಳು ಹುರಿದಂತಾ ಮಾತು. ಒಂದೊಂದು ವಿಚಾರಕ್ಕೂ ಹೊಂದಿರುವ ತರ್ಕ. ಪಯೋಗೆ ವೈಚಾರಿಕತೆಯ ಅರುಣೋದಯವೇ ಆದಂತಾಯಿತು.

"ಮಾನ್ಯರೇ ನೀವು ಎಣ್ಣೆ ವ್ಯಾಪಾರ ಯಾವಾಗ ಹಿಡಿದಿರಿ. ನಿಮ್ಮ ಕುಲಕಸುಬು ಇದಲ್ಲ ಎಂದು ನೀವೇ ಹೇಳಿದ್ದೀರಿ" ಎಂದ ಪಯೋ.

"ನಿನಗೆ ಆಶ್ಚರ್ಯವಲ್ಲವೇ. ನಾನು ಮಕ್ಕಳಿಗೆ ಅಕ್ಷರ ಕಲಿಸಿ ಹೋಮರ್‌ನ ವೀರಗಾಥೆಗಳನ್ನು ಬಾಯಿಪಾಠ ಮಾಡಿಸುವ ಮಾಸ್ತರನಷ್ಟೇ. ಆದರೂ ಮಿಲೇಟಸ್ ನಗರದ ಪಂಚಾಯ್ತಿಯ ಸದಸ್ಯನೂ ಆಗಿದ್ದೆ. ಪ್ರತಿವರ್ಷದ ಜಾತ್ರೆಯಲ್ಲಿ ಸುಂಕ ವಿಧಿಸುವ ಮತ್ತು ಅದನ್ನು ಹರಾಜು ಹಾಕುವ ಕೆಲಸ ಪಂಚಾಯ್ತಿಯದೇ. ಒಮ್ಮೊಮ್ಮೆ ಜಾತ್ರೆಗೆ ಸಾವಿರಾರು ಜನ ಸೇರುತ್ತಿದ್ದರು. ಒಬ್ಬೊಬ್ಬರಿಗೂ ಒಂದೊಂದು ದಮ್ಮಡಿ (ದುಮ್ಮಡಿ– ಪ್ರಾಚೀನ ಕಾಲದ ಗ್ರೀಕರ ನಾಣ್ಯ. ಡ್ರಾಕ್ಮಾದ ಅಪಬ್ರಂಶ ರೂಪ–



ಡ್ರಾಕ್ಮಾ–ಡ್ರಮ್ಮಾ–ದಮ್ಮಡಿ) ಸುಂಕ ವಿಧಿಸಲಾಗುತ್ತಿತ್ತು. ಈ ಹಣದಲ್ಲಿ ಜಾತ್ರೆಯ ಊಟ, ಕುಣಿತಗಳ ಖರ್ಚು ಹುಟ್ಟುತ್ತಿತ್ತು. ಕೆಲವು ವರ್ಷ ಸಾವಿರಾರು ಇರಲಿ ಕೇವಲ ನೂರು ಜನ ಕೂಡ ಬರ್ತಿರಲಿಲ್ಲ. ಪಂಚಾಯ್ತಿಗೆ ಇದು ಸಮಸ್ಯೆಯಾಗಿತ್ತು" ಎಂದು ಸುಮ್ಮನಾದ.

ಕುತೂಹಲದಿಂದ ಪಯೋ "ಮುಂದುವರೆಸಿ ಸ್ವಾಮಿ" ಎಂದ. ಅಲ್ಲಿ ನೋಡು ಇರುವೆ ಸಾಲು ಮೊಟ್ಟೆ ಸಾಗಿಸುತ್ತಿದೆ ಈ ದಿನ ಮಳೆಬಾರದು. ಆದರೆ ಒಂದು ವಾರದ ಗಡುವಿನಲ್ಲಿ ಮಳೆ ಬಂದೇ ಬರುತ್ತದೆ. ನಾವು ಬೇಗನೆ ಅಲ್ಲಿ ದೂರದಲ್ಲಿ ಕಾಣುವ ಗುಡ್ಡಗಳಲ್ಲಿನ ಗುಹೆಗಳಲ್ಲಿ ಆಶ್ರಯ ಪಡೆಯಬೇಕು" ಎಂದ ಥೇಲೀಸ್.

ಅಬ್ಬಾ ಎಷ್ಟು ಸೂಕ್ಷ್ಮ ಈ ಮುದುಕನ ಕಣ್ಣು. ಯಾವ ಯಾವುದಕ್ಕೆ ಸಂಬಂಧ ಕಲ್ಪಸುತ್ತಾನೆ, ಎಂದುಕೊಂಡ ಪಯೋ.

"ಅದಿರಲಿ ಪಂಚಾಯ್ತಿಯವರು ನನ್ನನ್ನು ಇದೇಕೆ ಹೀಗೆ ಎಂದು ಕೇಳಿದರು. 'ನೋಡಿ ಆಲೀವ್ ಎಣ್ಣೆ ಬೀಜಗಳ ಫಸಲು ಜಾಸ್ತಿ ಇದ್ದಾಗ, ಜನರಲ್ಲಿ ಹಣ ಜಾಸ್ತಿ ಇರುತ್ತದೆ. ಆಗ ಮೋಜು ಮಾಡಲು ಹೆಚ್ಚು ಜನ ಜಾತ್ರೆಗೆ ಬರುತ್ತಾರೆ. ಆಗ ನಿಮ್ಮ ಹಣ ಉಳಿಯುತ್ತದೆ.'– ಎಂದೆ ನಾನು"

ಅಂದಿನಿಂದ ಪಂಚಾಯ್ತಿಯವರು ಆಲೀವ್ ಎಣ್ಣೆ ಬೀಜಗಳ ಫಸಲನ್ನು ದಾಖಲಿಸಲು ನನಗೇ ಒಪ್ಪಿಸಿದರು"

"ಸರಿ ಮಹಾಶಯರೇ ನೀವು ಎಣ್ಣೆ ವ್ಯಾಪಾರಿಯಾದದ್ದು ಹೇಗೆ"

"ದುಡುಕಬೇಡ ಕೇಳು. ನಾನು ವ್ಯಾಪಾರಸ್ಥನಲ್ಲ. ವ್ಯಾಪಾರ ನನಗೆ ಹಿಡಿಸದು. ಆದರೂ ಸಹ ವ್ಯಾಪಾರ ತಂದೊಡ್ಡುವ ಹೊಚ್ಚ ಹೊಸ ಅವಕಾಶಗಳಿಗಾಗಿ ನಾನು ವ್ಯಾಪಾರ ಮಾಡುವಂತಾಯ್ತು. ದೇಶ ಸುತ್ತುವ ಅವಕಾಶ ವಿವಿಧ ವ್ಯಾಪಾರಸ್ತರೊಂದಿಗೆ ಮಾತುಕಥೆ ಇದು ನನಗೆ ಬಹಳ ಅಪ್ಯಾಯಮಾನ. ಹಿಂದಿನ ವರ್ಷ ಬೇಸಿಗೆಯ ಬೇಗೆ ಜಾಸ್ತಿ ಇತ್ತು. ಜನ ಬೇಸಿಗೆಯ ಬಿಸಿಗೆ ಬೇಸತ್ತು ಹೋದರು. ಮಳೆ ಒಂದೆರಡು ತಿಂಗಳು ಮುಂದೆ ಹೋಯ್ತು. ಕೆಲವರಂತೂ ದೂರದ ಮಲೆನಾಡುಗಳಿಗೆ ವಲಸೆ ಹೊರಟರು. ಅವರೆಲ್ಲಾ ತಮ್ಮಲ್ಲಿದ್ದ ಮರದ ಗಾಣಗಳನ್ನು ಹಣಕ್ಕಾಗಿ ಮಾರಿದರು. ಕೆಲವರು ಸಾಮಾನು ಜಾಸ್ತಿ ಎಂದೆನಿಸಿ ಹೊರಗೆಸೆದರು. ಇಷ್ಟು ಸುಡು ಬಿಸಿಲಿನಲ್ಲಿ ಆಲಿವ್ ಗಿಡಗಳು ಒಣಗುತ್ತವೆ. ಫಸಲು ಕೈ ಹತ್ತುವುದಿಲ್ಲ ಎಂದು ಅವರ ಅನಿಸಿಕೆ. ಆದರೆ ನಾನು ಇಟ್ಟಿದ್ದ ದಾಖಲೆಗಳಿಂದ ನನಗೆ ಕೆಲವು ಅಂಶಗಳು ಗೊತ್ತಾದವು. ಪ್ರತಿ ಏಳು ವರ್ಷಗಳಿಗೊಮ್ಮೆ ಹೀಗಾಗುತ್ತಿತ್ತು. ಬೇಸಿಗೆಯ ಬಿಸಿ ಜಾಸ್ತಿಯಾದಾಗ ಎಣ್ಣೆ ತುಂಬಿದ ಕಾಯಿಗಳಲ್ಲಿ ನೀರಿನ ಪಸೆ ಇಂಗುತ್ತದೆ. ಆಗ ಗಾಣವಾಡಿದ ಎಣ್ಣೆ

ಬೀಜಗಳಲ್ಲಿ ನೀರು ಬೆರೆಯದ ಅತ್ಯುತ್ತಮ ಆಲೀವ್ ಎಣ್ಣೆ ಸಿಗುತ್ತದೆ. ಈ ಎಣ್ಣೆ ಎಷ್ಟು ಉತ್ಕೃಷ್ಟವೆಂದರೆ, ಹತ್ತುವರ್ಷ ಇಟ್ಟರೂ ಕೆಡುವುದಿಲ್ಲ–" ಮತ್ತೆ ಆ ಮುದುಕ ಮಾತು ನಿಲ್ಲಿಸಿದ.

ಆಹಾ! ಎಂತಹ ಘಾಟಿ ಈ ಮುದುಕ. ಜಾತ್ರೆಗೆ ಜನರ ಲೆಕ್ಕ ಇಡೋ ಮಹರಾಯಾ ಎಂದರೆ, ಬೇಸಿಗೆಯ ಅವಧಿ, ಎಣ್ಣೆಬೀಜದ ಫಸಲು, ಗಾಣವಾಡಿದಾಗ ನೀರಿನ ಪಸೆ ಇಲ್ಲದಿರುವುದು, ಇವನ್ನೆಲ್ಲಾ ಗಮನಿಸಿದ್ದಾನಲ್ಲ ಎಂದು ಯೋಚಿಸಿದ ಪಯೋ.

"ಪಯೋ, ಶಬ್ದ ಕೇಳಿದೆಯಾ. ಅಲ್ಲಿ ಹನ್ನೊಂದನೆಯ ಕತ್ತೆ ಗೊರಗುಟ್ಟುತ್ತಿದೆ. ಅದಕ್ಕೆ ನೀರು ಕುಡಿಸು" ಎಂದ ಥೇಲೀಸ್.

"ಹೌದು ಮಾನ್ಯರೇ ಕೇಳಿಸಿತು ಇದೀಗ ಹೊರಟೆ" ಎಂದ ಪಯೋ. ಅವನು ಸುಳ್ಳು ಹೇಳಿದ್ದ. ಥೇಲೀಸ್‌ನ ಮೋಡಿಯ ಮಾತಿನಲ್ಲಿ ಅವನಿಗೆ ಯಾವ ಶಬ್ದವು ಕೇಳಿಸಿರಲಿಲ್ಲ.

"ಎಲ್ಲಾ ಕತ್ತೆಗಳಿಗೂ ನೀರು ಹನಿಸಿ ಬಂದೆ" ಎಂದ ಪಯೋ.

"ಹಾಗೆ ಮಾಡಬಾರದಿತ್ತು, ಅವು ನೀರು ಜಾಸ್ತಿ ಕುಡಿದರೆ ದಾರಿಯಲ್ಲಿ ಹೆಚ್ಚು ಬಾರಿ ಉಚ್ಚೆ ಹೊಯ್ಯುತ್ತವೆ. ಅದರ ಜಾಡನ್ನು ಹಿಡಿದು ತೋಳಗಳೂ ಬರಬಹುದು, ದರೋಡೆಕೋರರು ಬರಬಹುದು ಎಂದ ಥೇಲೀಸ್.

ಗೊತ್ತಾಗಲಿಲ್ಲ ಮಹಾಶಯರೇ ಕ್ಷಮಿಸಿ. ಇನ್ನು ಮುಂದೆ ಎಚ್ಚರ ವಹಿಸುತ್ತೇನೆ" ಎಂದು ಬೆರಗಾದ ಪಯೋ.

"ಇನ್ನು ನನ್ನ ಕಥೆಗೆ ಬರೋಣ. ನಾನು ಜನರು ಬಿಸಾಡಿದ ಗಾಣಗಳನ್ನೆಲ್ಲಾ ನನ್ನ ಹಿತ್ತಲಿಗೆ ಸಾಗಿಸಿದೆ. ಕೆಲವರ ಬಳಿ ಅತೀ ಕಡಿಮೆ ಬೆಲೆಗೆ ಕೊಂಡೆ. ಒಂದಿಬ್ಬರು ಬಡಗಿಗಳನ್ನು ಕರೆಸಿ ಅವನ್ನೆಲ್ಲಾ ರಿಪೇರಿ ಮಾಡಿಸಿದೆ. ಜನರು ನಕ್ಕರು. ಕಾಯಿ ಕೂಡ ಬಿಡದ ಕಾಲದಲ್ಲಿ ಎಣ್ಣೆಗಾಣದ ರಿಪೇರಿ ಮಾಡಿಸುತ್ತಿದ್ದಾನಲ್ಲ ಎಂದು. ನಾಲ್ಕು ತಿಂಗಳುಗಳು ಕಳೆದವು. ತಂಪುಗಾಳಿ ಬೀಸಿತು. ಜನ ವಾಪಸ್ ಬಂದರು. ಆಲೀವ್ ಎಣ್ಣೆಯ ಬೀಜಗಳು ಪಕ್ಕಾಗಿದ್ದವು. ನೋಡಿ ಖುಷಿಪಟ್ಟರು. ತಂಪು ಗಾಳಿ ಜೋರಾಯಿತು. ಇನ್ನೇನು ಮಳೆಗಾಲ ಶುರುವಾಗುವುದರಲ್ಲಿತ್ತು. ಅಷ್ಟರೊಳಗೆ ಎಣ್ಣೆಬೀಜಗಳನ್ನು ಕಿತ್ತು ಗಾಣ ಆಡಬೇಕು. ಗಾಣಗಳನ್ನು ತಯಾರಿಸಿಕೊಳ್ಳಲು ಸಮಯವೇ ಇಲ್ಲ. ಜನ ಓಡಿ ಬಂದರು ನನ್ನೆಡೆಗೆ... ನಾನು ಹತ್ತು ದಮ್ಮಡಿಗೆ ಒಂದರಂತೆ ಮಾರಿದೆ.



ಎರಡು ದಮ್ಮಡಿಗೆ ನನಗೆ ಮಾರಿದ್ದ ಜನರೇ ಹತ್ತು ದಮ್ಮಡಿ ತೆತ್ತು ಕೊಂಡರು. ಎಣ್ಣೆ ಚೆನ್ನಾಗಿ ಬಂದಿತು. ಕೊಳ್ಳುವವರಾರು? ಹಣವಿದ್ದದ್ದು ನನ್ನ ಬಳಿಯೇ. ನಾನು ಮಾರುಕಟ್ಟೆಯ ದರಕ್ಕಿಂತ ಒಂದು ದಮ್ಮಡಿ ಕಡಿಮೆ ಕೊಡುವೆನೆಂದು. ಕೊಟ್ಟರೆ ಕೊಡಿ ಇಲ್ಲದಿದ್ದರೆ ಬಿಡಿ ಎಂದೆ. ಜಾತ್ರೆ ಹತ್ತಿರ ಬರುತ್ತಿತ್ತು. ಮೋಜು ಮಾಡಲು ಜನರಿಗೆ ಹಣ ಬೇಕಿತ್ತು. ನನಗೇ ಎಣ್ಣೆ ಮಾರಿದರು: ಹೀಗಾಯ್ತು ನೋಡು" ಎಂದ ಥೇಲೀಸ್.



"ಅದು ಸರಿ ಸ್ವಾಮಿ ಈಗ ಈ ವಯಸ್ಸಿನಲ್ಲೇಕೆ ಅಲೆಕ್ಸಾಂಡಿಯಾಕ್ಕೆ ಪಯಣ" ಎಂದೆ.

"ನೋಡು ಪಯೋ ಅಲ್ಲಿ ಅನೇಕ ನುರಿತ ಗಣಿತಜ್ಞರಿದ್ದಾರೆ ಅವರೊಡನೆ ಸಂಭಾಷಿಸಬೇಕೆಂದಿದ್ದೇನೆ." ಎಂದ ಥೇಲೀಸ್.

"ಅದು ಸರಿ ಸ್ವಾಮಿ ಎಣ್ಣೆ ವ್ಯಾಪಾರವೇ ಏಕೆ? ಹಾಗೆಯೇ ಯಾತ್ರಿಕರಾಗಿ ಹೋಗಬಹುದಲ್ಲ."

"ಹಾಗಾಗದು. ವ್ಯಾಪಾರಸ್ಥರಿಗೇ ಅಲ್ಲಿ ಮಾರ್ಯಾದೇ. ಅಲ್ಲಿ ದರ್ಬಾರು ನಡೆಸುವವರೆಲ್ಲಾ ಪುರೋಹಿತರುಗಳೇ. ವಿದ್ಯಾವಂತರನ್ನು ಕಂಡರೆ ಅವರಿಗಾಗದು. ಅವರ ವಿದ್ಯೆಯನ್ನು ಬೇರೆಯವರು ಕದಿಯಬಾರದು ಅಂತ."

"ಹಾಗಾದರೆ ಹೇಗೆ ವಿಷಯ ತಿಳಿದುಕೊಳ್ಳಬೇಕು ಅಂತೀರಿ ಸ್ವಾಮಿ" ಎಂದ ಪಯೋ.

"ಇದೆಯಲ್ಲಾ ಸರಕು! ಅತ್ಯಂತ ಉತ್ಕೃಷ್ಟ ಆಲೀವ್ ಎಣ್ಣೆ. ಇದು ಅವರ ಮೈಕಾಂತಿಗೆ ಬೇಕು. ಅವರ ಸುಗಂಧ ದ್ರವ್ಯಗಳಿಗೆ ಬೇಕು. ನನಗೆ ಅವರ ಗಣಿತ ಬೇಕು. ಎಂದ ಥೇಲೀಸ್ "ಅವರಿಗೆ ಆಲೀವ್ ಎಣ್ಣೆಯ ರುಚಿ ಹತ್ತಿದ ಮೇಲೆ ನನ್ನ ಗಣಿತ ಬಿಚ್ಚುತ್ತೇನೆ" ಎಂದೂ ಸೇರಿಸಿದ.

"ಮಹಾಶಯರೇ ನಿಮ್ಮ ಗಣಿತ ತಿಳಿಯಲೆಂದೇ ನಾನು ಉತ್ಸುಕನಾಗಿದ್ದೇನೆ" ಎಂದ ಪಯೋ.

"ನನ್ನದು ಹೆಚ್ಚು ಸಂಶೋಧನೆಗಳೇನೂ ಇಲ್ಲ. ನನ್ನ ಗುರುಗಳೆಲ್ಲಾ ಗಣಿತ ಹೇಳಿ ಕೊಡಿ ಎಂದರೆ ಹೊಲಗದ್ದೆಗಳಿಗೇ ಕರೆದುಕೊಂಡು ಹೋಗ್ತಾ ಇದ್ದರು. ಲಿನನ್ ಹಗ್ಗ ಹಿಡಿದು ಮೊಳದ ಅಳತೆಗಳಿಗೆ ಗಂಟು ಹಾಕಿ, ಹೊಲಗಳ ಉದ್ದ ಅಗಲಗಳನ್ನು ಅಳೆಸುವುದು. ಅಲ್ಲೇ ಮರಳಿನ ಮೇಲೆ ಗುಣಾಕಾರ ಮಾಡಿಸುವುದು ಅವರ ಪದ್ಧತಿ. ಆದರೆ ನಾನು ಮೊಳದ ಅಳತೆಗಳನ್ನು ಕೈಬಿಟ್ಟು ಲಿನನ್ ಬಟ್ಟೆಯ ತುಂಡಿನ ಮೇಲೆ ಗುರುತು ಹಾಕತೊಡಗಿದೆ. ಮಿಕ್ಕಿದ್ದೆಲ್ಲಾ ಸುಲಭವಾಯ್ತು" ಎಂದ ಥೇಲೀಸ್.

"ಸ್ವಾಮಿ ಮೊಳದುದ್ದದ ಅಳತೆಗಳನ್ನು ಬಟ್ಟೆಯ ಮೇಲೆ ಮಾಡಲಾದೀತೆ. ಅಷ್ಟುದ್ದ ಬಟ್ಟೆ ಎಲ್ಲಿಂದ ತರಬೇಕು" ಎಂದ ಪಯೋ.

"ಅಲ್ಲೆ ಗುಟ್ಟು ಇರುವುದು. ನಾನು ಗಣಿತವನ್ನು ಇದುವರೆಗೂ ಮಾತುಕತೆಯ ಪರಿಧಿಯಲ್ಲೇ ಇರಿಸಿದ್ದೇನೆ. ಅದನ್ನು ಅಮೂರ್ತಗೊಳಿಸಿಕೊಂಡರೆ ಬಹಳ ಚಿಕ್ಕದಾದ, ಚೊಕ್ಕನಾದ ತಥ್ಯ ಹೊಳೆಯುತ್ತದೆ. ಇದು ನೆನಪಿಡಲೂ ಸುಲಭ ಮತ್ತು ಯಾವುದೇ ಮಾನಕ್ಕೂ ಒಗ್ಗುವಂಥದ್ದು" ಎಂದ ಥೇಲೀಸ್.



"ಮಹಾಶಯರೇ ನನ್ನ ಕುತೂಹಲ ಇಮ್ಮಡಿಯಾಗಿದೆ ದಯವಿಟ್ಟು ಉದಾಹರಣೆಯೊಂದಿಗೆ ವಿವರಿಸಿ" ಎಂದ ಪಯೋ.

"ಅದಕ್ಕೆ ಏನೋ ನನ್ನ ಗುರುಗಳು ಒಂದು ಮೂಲೆಯಲ್ಲಿ ಲಂಬಕೋನವಿದೆಯೇ ಎಂದು ತಾಳೆ ನೋಡಲು 12 ಗಂಟಿನ ದಾರ ಬಳಸುತ್ತಿದ್ದರು. ಇದರಲ್ಲಿ ಒಂದು ಬಾಹುವಿನಲ್ಲಿ ನಾಲ್ಕು ಗಂಟು, ಅದರ ಪಕ್ಕದಲ್ಲಿ ಮೂರು ಗಂಟಿನ ಬಾಹು ಇರುವಂತೆ ಮಾಡಿದಾಗ, ಒಂದು ತ್ರಿಕೋನ ಮೂಡುತ್ತದೆ. ಆಗ ಐದು ಗಂಟುಗಳು ತ್ರಿಕೋನದ ಮೂರನೇ ಬಾಹುವಾಗುತ್ತದೆ. ಇಲ್ಲಿ ಗಂಟುಗಳ ಅಂತರ ಒಂದೊಂದು ಮೊಳ. ಆಗ 4 ಗಂಟು ಮತ್ತು 3 ಗಂಟುಗಳ ನಡುವಿನ ಕೋನ ಲಂಬಕೋನ ಎಂದು ಹಿರಿಯರು ತಿಳಿಯುತ್ತಿದ್ದರು. ಮತ್ತು ಇದರಿಂದಲೇ ಕಟ್ಟಡಗಳ ಮೂಲೆ ಮಟ್ಟ ನೋಡಿ ತಾಳೆ ಮಾಡುತ್ತಿದ್ದರು.

ನಾನು ಈ ಮೊಳದುದ್ದದ ಅಳತೆಗಳನ್ನು ಕೈಬಿಟ್ಟೆ, ನನ್ನ ತರ್ಕ ನನ್ನ ಹೆಬ್ಬೆರಳಿನ ಉದ್ದವೋ, ಅಥವಾ ಉಂಗುಷ್ಠದ ಉದ್ದವೋ ಇದ್ದರೂ ಸಹ, ಈ ಆಕೃತಿಯಲ್ಲಿ ಲಂಬಕೋನ ಇದ್ದೇ ತೀರಬೇಕು ಎಂಬುದು.

"3, 4, 5 ಗಂಟಿನ ಅಂತರದ ಅಳತೆಗಳು ಮುರಿದ ಹುಲ್ಲುಕಡ್ಡಿಯ ಉದ್ದವಾದರೂ ಸಹ ಲಂಬಕೋನ ತ್ರಿಕೋನವೇ ಆಕೃತಿಯಾಗಿ ಬರಬೇಕು. ಈ ಸತ್ಯವನ್ನು ನಾನು ಲಿನನ್ ಬಟ್ಟೆಯ ಮೇಲೆ ಚಿತ್ರಿಸಿದಾಗ ತಿಳಿದುಕೊಂಡೆ" ಎಂದ ಥೇಲೀಸ್

ಪಯೋ ಅವಕ್ಕಾದ, ಕೈ ಮೊಳದುದ್ದದ ಅಳತೆಯನ್ನು ಗೇಣುದ್ದ ಬಟ್ಟೆಯ ಮೇಲೆ ಮಾಡಿ ಬಿಟ್ಟನಲ್ಲಾ ಈ ವ್ಯಕ್ತಿ ಎಂದು ಆಶ್ಚರ್ಯಪಟ್ಟ.

"ಮಹಾಶಯರೇ ಮುಂದುವರೆಸಿ. ತಾವು ಬಟ್ಟೆಯ ಮೇಲೆ ಗೆರೆ ಮೂಡಿಸಿ ಏನೇನು ಕಂಡುಕೊಂಡಿರಿ".

"ಬಟ್ಟೆಯ ತುಂಡು ಕೈಯಲ್ಲಿ ಹಿಡಿದಾಗ ಹೇಗೆ ಬೇಕಾದರೂ ಮಡಚಬಹುದು. ಹೀಗೆ ಆಕೃತಿಗಳನ್ನು ಬಟ್ಟೆಯ ಮೇಲೆ ಮೂಡಿಸಿ, ಮಡಿಸಿ ಕಂಡುಕೊಂಡ ಸತ್ಯಗಳು ಇವು

(ಅ) ಒಂದು ತ್ರಿಕೋನದಲ್ಲಿನ ಎರಡು ಬಾಹುಗಳು ಒಂದೇ ಅಳತೆಯಾಗಿದ್ದರೆ ಅದರ ತಳದ ಅಭಿಮುಖ ಕೋನಗಳೂ ಸಮವಾಗಿರುತ್ತದೆ.

(ಆ) ಎರಡು ಸರಳ ರೇಖೆಗಳು ಒಂದು ಬಿಂದುವಿನಲ್ಲಿ ಅಡ್ಡ ಹಾಯ್ದಾಗ ಪರಸ್ಪರ ವಿರುದ್ಧ ಕೋನಗಳು ಸಮನಾಗಿರುತ್ತವೆ.

(ಇ) ಒಂದು ವೃತ್ತದಲ್ಲಿನ ವ್ಯಾಸವು ಆ ವೃತ್ತದ ವಿಸ್ತೀರ್ಣವನ್ನು ಇಬ್ಭಾಗ ಮಾಡುತ್ತದೆ.

(ಈ) ಒಂದು ವ್ಯಾಸವು ಅರ್ಧವೃತ್ತದ ಅಂಚಿನಲ್ಲಿ ಮೂಡಿಸುವ ಕೋನವು ಯಾವಾಗಲೂ ಲಂಬಕೋನವಾಗಿರುತ್ತದೆ.

"ಸ್ವಾಮಿ ಇದನ್ನು ನಾನೂ ಕಂಡುಕೊಳ್ಳಬಹುದೇ" ಎಂದ ಪಯೋ.

"ಅದಕ್ಕೇನು ಈ ಸತ್ಯಗಳಲ್ಲಿ ನನ್ನ ಕೈಚಳಕವೇನೂ ಇಲ್ಲ ಒಂದು ಚೂರು ಲಿನಿನ್ ಬಟ್ಟೆಯ ಮೇಲೆ ಈ ಆಕೃತಿಗಳನ್ನು ಬರೆದು ಅರ್ಧಕ್ಕೆ ಮಡಚು ಆಗ ತಿಳಿಯುತ್ತದೆ. ಎಂದ ಥೇಲೀಸ್.

ಅಷ್ಟು ಹೊತ್ತಿಗೆ ಸಂಜೆಯಾಗಿತ್ತು. "ಎಲ್ಲಿ ತಂಗುವುದು ಸ್ವಾಮಿ" ಎಂದ ಪಯೋ.

"ನಿಲ್ಲುವುದು ಬೇಡ. ಆ ಬೆಟ್ಟ ದಾಟಿದರೆ ಆಯ್ತು ಕಡಲು ಸಿಗುತ್ತದೆ. ಬೆಳಗಿನ ಜಾವ ಹಾಯಿ ದೋಣಿಗಳು ಹೊರಡಲನುವಾಗಿರುತ್ತವೆ. ಅಲ್ಲಿಯೇ ದೋಣಿಯೊಳಗೆ ಕಾಲು ಚಾಚಿದರಾಯ್ತು" ಎಂದ ಥೇಲೀಸ್.





**** 3 ****

ಈ ಮುದುಕ ಈ ವಯಸ್ಸಿನಲ್ಲೇ ಇಷ್ಟು ನಿಖರವಾಗಿ ಲೆಕ್ಕಾಚಾರ ಮಾಡುತ್ತಾನಲ್ಲಾ. ಇನ್ನು ನನ್ನ ವಯಸ್ಸಿನಲ್ಲಿದ್ದಾಗ ಹೇಗಿದ್ದನೋ ಎಂದುಕೊಂಡ ಪಯೋ.

"ಕತ್ತೆಗಳು ತುಂಬ ದಣಿದಂತೆ ಕಾಣ್ತವೆ ಸ್ವಾಮಿ. ಮಂದವಾಗಿ ಹೆಜ್ಜೆ ಹಾಕುತ್ತಿವೆ" ಎಂದ.

"ನೋಡು ಪಯೋ ಆ ಹನ್ನೊಂದನೇ ಕತ್ತೆ ಇದೆಯಲ್ಲ ನೀರಿಗೆ ಗುಟುರು ಹಾಕ್ತಾ ಇದ್ದದ್ದು, ಅದನ್ನು ಮೊದಲ ಕತ್ತೆಯ ಮುಂದೆ ನಿಲ್ಲಿಸು. ಆಗ ಸರಿಹೋಗುತ್ತದೆ" ಎಂದ ಥೇಲೀಸ್.

"ಸ್ವಾಮಿ ಅದೂ ಸಹ ನಿಧಾನವಾಗಿಯೇ ನಡೀತಾ ಇದೆ. ಮುಂದೆ ಕಟ್ಟಿದರೆ ಬೇಗನೆ ಹೆಜ್ಜೆ ಹಾಕೀತೇ" ಎಂದ ಪಯೋ.

"ಓ! ನಿನಗೆ ನಾನು ಹೇಳಿಲ್ಲ, ನನ್ನ ಲಾಯದಲ್ಲಿರುವ ಅತಿ ಬುದ್ಧಿವಂತ ಕತ್ತೆ ಅದು" ಎಂದ ಥೇಲೀಸ್.

"ಮಹಾಶಯರೇ ನೀವು ಮಾತನಾಡುವ ಪ್ರತಿಯೊಂದು ಪದಕ್ಕೂ ಒಂದೊಂದು ಚರಿತ್ರೆಯಿದೆ ಎನ್ನಿಸುತ್ತಿದೆ ನನಗೆ. ನಿಮ್ಮ ಪಯಣದಲ್ಲಿ ಕತ್ತೆಗಳ ಉಸ್ತುವಾರಿ ಕೊಟ್ಟು ಉಪಕರಿಸಿದಿರಿ. ಈಗ ಈ ಬುದ್ಧಿವಂತ ಕತ್ತೆಯ ಕಥೆ ಹೇಳಿ" ಎಂದ ಪಯೋ.

ನನಗೂ ಅಷ್ಟೇ. ನಿನ್ನ ಸಹವಾಸ ಒಂದು ಉಪಕಾರವೇ. ಜೊತೆಗೆ ಒಬ್ಬರಿದ್ದರೆ ಪಯಣದ ಆಯಾಸ ತಿಳಿಯುವುದಿಲ್ಲ" ಎಂದು ಕತ್ತೆಯ ಕಥೆ ಹೇಳಲು ಉಪಕ್ರಮಿಸಿದ ಥೇಲೀಸ್.

"ನಾನು ಎಣ್ಣೆ ವ್ಯಾಪಾರಕ್ಕಿಳಿಯುವ ಮೊದಲು ಉಪ್ಪಿನ ವ್ಯಾಪಾರ ಮಾಡುತ್ತಿದ್ದೆ. ಒಲಂಪಿಕ್ ಕ್ರೀಡೆಗಳು ಶುರುವಾದಾಗ ಹಳ್ಳಿಯಲ್ಲಿ ಹುಡುಗರಾರೂ ಪಾಠ ಕೇಳಲೂ, ಅಕ್ಷರ ಕಲಿಯಲೂ ಇರುತ್ತಿರಲಿಲ್ಲ. ಆಗ ಉಪ್ಪಿನ ಗಣಿಗೆ ಹೋಗಿ ಉಪ್ಪು ತುಂಬಿಸಿಕೊಂಡು ಹಳ್ಳಿಗಳ ಮೇಲೆ ಹೊರಡುತ್ತಿದ್ದೆ. ಉಪ್ಪು ತುಂಬಿದ ಚೀಲಗಳನ್ನು ಹೊತ್ತು ಕತ್ತೆಗಳು ಒಂದು ಸಣ್ಣ ಕಾಲುವೆ ದಾಟಬೇಕಾಗುತ್ತಿತ್ತು. ಆ ಕಾಲುವೆಗೆ ಒಂದು ದೊಡ್ಡ ಮರದ ದಿಮ್ಮಿಯನ್ನು ಅಡ್ಡಲಾಗಿ ಹಾಕಿದ್ದರು. ಅದೇ ಸೇತುವೆಯಾಗಿ ಒಂದರ ಹಿಂದೊಂದರಂತೆ ಕತ್ತೆಗಳೂ ಮನುಷ್ಯರೂ ಕಾಲುವೆ ದಾಟಬೇಕಾಗುತ್ತಿತ್ತು. ಯಾವಾಗಲೂ ಈ ಚುರುಕು ಕತ್ತೆಯೇ ಮೊದಲು ಹೆಜ್ಜೆ ಹಾಕುತ್ತಿತ್ತು.

ಒಮ್ಮೆ ಯಾವುದೋ ಕಾರಣದಿಂದಾಗಿ ಇದು ಸಾಲಿನ ಹಿಂದೆ ಬಿತ್ತು. ಮಿಕ್ಕ ಕತ್ತೆಗಳು ಒಂದರ ಹಿಂದೊಂದು ಸಾಲಾಗಿ ಮರದ ದಿಮ್ಮಿಯ ಮೇಲೆ ನಡೆಯುತ್ತಿದ್ದವು. ಈ ಚುರುಕು ಕತ್ತೆಯೂ ಫೀ.... ಎಂದು ಕಿರುಚುತ್ತಾ ಓಡಿತು. ಮರದ ಸೇತುವೆಯ ಮೇಲೆ ನುಗ್ಗಲಾಗದೇ ಪಕ್ಕದ ಕಾಲುವೆಗೆ ಬಿದ್ದಿತು. ಹಾಗೆಯೇ ಈಜಿಕೊಂಡು ಆ ಕಡೆ ದಡಕ್ಕೆ ಓಡಿತು. ತಾನೇ ನಾಯಕನಾಗಬೇಕೇನೋ ಎಂದುಕೊಂಡೆ ಆದರೆ ಮುಂದಾದದ್ದು ಸೋಜಿಗ"

"ಹೌದು ಸ್ವಾಮಿ ನಮ್ಮ ಹಳ್ಳಿಯಲ್ಲೂ ಹೀಗೆಯೇ. ಮೇಯಲು ಹೋದ ದನ, ಕರು, ಕುರಿಗಳಲ್ಲೂ ಸಹ ಒಂದು ನಾಯಕನಿದ್ದೇ ಇರುತ್ತೆ. ಮೊದಲು ಮನೆಯ ಹೊರಗೆ ಹೋಗುವುದು ಅದೇ. ಬರುವಾಗಲೂ ಸಹ ಅದೇ ಮೊದಲು" ಎಂದ ಪಯೋ.

"ಅದಲ್ಲ ಪಯೋ. ಮರುದಿನ ಈ ಚುರುಕು ಕತ್ತೆಯನ್ನು ಮೊದಲೇ ಬಿಟ್ಟರೂ ಸಹ, ಸೇತುವೆಯ ಮೇಲೆ ನಡೆಯಲಿಲ್ಲ. ನೇರವಾಗಿ ನೀರಿನಲ್ಲಿ ಧುಮುಕಿ ಆ ಕಡೆಗೆ ಈಜಿತು. ಎರಡು, ಮೂರು, ನಾಲ್ಕು ದಿನಗಳು ಹೀಗೆಯೇ ಆಯ್ತು. ನಾನು ಯೋಚಿಸಿದೆ. ಹೊಳೆಯಿತು ನೋಡು. ನೀರಿನಲ್ಲಿ ಈಜಿದಾಗ ಉಪ್ಪು ಕರಗಿ ಭಾರ ತಗ್ಗಿ ಈ ಕತ್ತೆಗೆ ಹಾಯೆನಿಸುತ್ತಿತ್ತು" ಎಂದ ಥೇಲೀಸ್.

"ಹಾ,ಹಾ,ಹಾ," ಎಂದು ನಕ್ಕ ಪಯೋ

"ಆಗೇನು ಮಾಡಿದಿರಿ ಸ್ವಾಮಿ, ಕತ್ತೆಗೆ ನಾಲ್ಕು ಬಾರಿಸಿದಿರಾ"

"ಇಲ್ಲ, ಇಲ್ಲ ಆಲೋಚನೆಯಿಂದ ಬದಲಿಸಿಕೊಂಡ ಚರ್ಯೆಗೆ ದಂಡನೆ ಪರಿಹಾರ ನೀಡದು. ಇದಕ್ಕೆ ಮನರಾಲೋಚನೆ ಮಾಡುವಂತೆ ಪ್ರತಿಕ್ರಿಯೆ ಮಾಡಬೇಕು. ನಾನು ಮಾರನೇ ದಿನದಿಂದ ತೆಂಗಿನ ಜುಂಗು ತುಂಬಿದ ಚೀಲಗಳನ್ನು ಕತ್ತೆಯ ಮೇಲೆ ಹಾಕಿದೆ. ಎಂದಿನಂತೆ ಕತ್ತೆ ನೀರಿಗಿಳಿದು ಈಜಲಾರಂಭಿಸಿತು.

ನೀರು ಹೀರಿಕೊಂಡ ಜುಂಗು ಭಾರವೋ ಭಾರ. ಒಂದೆರಡು ದಿನಗಳಲ್ಲಿ ಈ ಕತ್ತೆ ದಾರಿಗೆ ಬಂತು." ಎಂದು ಥೇಲೀಸ್ ಮೌನವಾಗಿ ಆಕಾಶದ ನಕ್ಷತ್ರಗಳನ್ನು ನೋಡತೊಡಗಿದ.

ಭಪ್ಪರೇ! ಕತ್ತೆಗೆ ಬುದ್ಧಿಕಲಿಸಿದ ಭೂಪನಿವನು. ಅದಿರಲಿ ಇಂತಹವರಿಗೆ ಬುದ್ದಿವಂತ ಕತ್ತೆಗಳೇ ಸಿಗುತ್ತವೆಯಲ್ಲಾ. ಅಥವಾ ಇಂತಹವನೊಡನಾಟವಿದ್ದರೆ ಅವೇ ಬುದ್ಧಿ ಕಲಿಯುತ್ತವಲ್ಲಾ– ಎಂದೆಲ್ಲಾ ಯೋಚಿಸಿದ ಪಯೋ.



ದಾರಿಯಲ್ಲೊಂದು ಸಣ್ಣ ಕಣಿವೆ ಸಿಕ್ಕಿತು. ಕೆಳಗೆ ಜುಳು ಜುಳು ಹರಿವ ನದಿ. ಅದಕ್ಕೊಂದು ಸಣ್ಣ ಸೇತುವೆ. ಆದರೆ ಹಾದಿಯೂ ಕಣಿವೆಯ ಪಾರ್ಶ್ವದ ಬೆಟ್ಟದಲ್ಲಿ ಕೊಂಚದೂರ ಸಾಗಿ ಕೆಳಗೆ, ಸೇತುವೆಯತ್ತ ಕಡಿದಾಗಿ ಇರುವೆಡೆ ಇಳಿಯುತ್ತಿತ್ತು. ಕತ್ತೆಗಳು ದಣಿದಿದ್ದವು. ಚುರುಕು ಕತ್ತೆ ಒಮ್ಮೆ ಕೆಳಗಿನ ನೀರು ನೋಡಿತು. ದೂರ ಚಾಚಿದ ದಾರಿಯನ್ನೂ ಅದು ಇಳಿಜಾರಿನಲ್ಲಿ ಕೆಳಗೆ ಇಳಿದಿರುವುದನ್ನೂ ನೋಡಿತು. ಅದಕ್ಕೇನನ್ನಿಸಿತೋ ಅದು ನಿಂತಲ್ಲಿಂದಲ್ಲೇ ಕಣಿವೆಯ ಕೆಳಗೆ ದಡ ದಡ ಇಳಿಯಿತು. ಎಲ್ಲ ಕತ್ತೆಗಳೂ ಹಿಂಬಾಲಿಸಿದವು.

"ಆಹಾ ನೋಡಿದೆಯಾ ಪಯೋ. ನಮ್ಮ ಚುರುಕು ಕತ್ತೆಯ ಜಾಣ್ಮೆ. ಇದಕ್ಕೂ ಗಣಿತ ಗೊತ್ತು ನೋಡು."

"ಅಂಥದೇನು ಮಹಾಶಯರೇ, ಕತ್ತೆಯ ಲೆಕ್ಕಾಚಾರ! ಎಣ್ಣೆಯ ಜಾಡಿಗಳು ಎಲ್ಲಿ ಉರುಳಿ ಹೋದಾವೋ ಎಂದು ಭಯಪಟ್ಟಿದ್ದೆ ನಾನು" ಎಂದ ಪಯೋ.

ಅಲ್ಲವಯ್ಯ ಒಂದು ತ್ರಿಕೋನದಲ್ಲಿನ ಎರಡು ಬಾಹುಗಳ ಮೊತ್ತ ಮೂರನೆಯದಕ್ಕಿಂತ ಜಾಸ್ತಿ ಎಂದು ನೀನು ಕೇಳಿಲ್ಲವೆ? ಇದೇ ಕತ್ತೆಗೂ ತಿಳಿದಿದೆ. ನೇರ ಹೋಗಿ, ಪಕ್ಕದಲ್ಲಿಳಿದು ಸೇತುವೆಯ ಬಳಿ ಬರುವುದಕ್ಕಿಂತ, ನೇರವಾಗಿ ಕಣಿವೆಗೆ ಇಳಿಯುವುದೇ ಹತ್ತಿರವಲ್ಲವೇ" ಎಂದ.

"ಕತ್ತೆಯ ನಡಿಗೆಯಲ್ಲೂ ಗಣಿತ ಗುರ್ತಿಸುವ ಈ ಮುದುಕನ ಆಳ ಎಷ್ಟು ಎಂದು ನಾನು ಅರ್ಥಮಾಡಿಕೊಳ್ಳಬಲ್ಲೆನೇ" ಎಂದುಕೊಂಡ ಪಯೋ.

ಮರುದಿನ ಮುಂಜಾನೆ. ಕಡಲ ತಡಿಗೆ ಸೇರಿದರು ಈ ಯಾತ್ರಿಗಳು. "ಅಲೆಕ್ಸಾಂಡ್ರಿಯಾಕ್ಕೆ ಬನ್ನಿ ಬನ್ನಿ" ಎಂದು ಕೂಗುತ್ತಿದ್ದ ದೋಣಿಯ ಮುಖಂಡ. ಥೇಲೀಸ್, ಪಯೋ ಮತ್ತು ಅವರ ಹನ್ನೆರಡು ಕತ್ತೆಗಳು ದೊಡ್ಡದೊಂದು ಹಾಯಿ ದೋಣಿಗೆ ಹತ್ತಿದರು. ಮುಂಜಾವಿನ ತಂಪುಗಾಳಿಗೆ ಮೈಯೊಡ್ಡಿದ ದಣಿದ ಜೀವಗಳಿಗೆ ಜೊಂಪು ಹತ್ತುತ್ತಿದ್ದಂತೆ, ದೋಣಿಯ ಹಾಯಿಗಳು ಬಿಚ್ಚಿಕೊಂಡು ದೋಣಿಯನ್ನು ಸೆಳೆಯತೊಡಗಿದವು. ಲಂಗರು ತೆಗೆದದ್ದೇ ಮುನ್ನುಗ್ಗಿತು ದೋಣಿ ಈಜಿಪ್ಟ್‌ನ ಕಡೆಗೆ.



**** 4 ****

ಅಲೆಕ್ಸಾಂಡ್ರಿಯಾ ದೊಡ್ಡ ಪಟ್ಟಣ. ಎಲ್ಲಿ ನೋಡಿದರೂ ಜನ, ಬಿಳಿಯರು, ಕರಿಯರು, ಕೆಂಪು ಬಣ್ಣದವರು, ಗಿಡ್ಡರು, ದೈತ್ಯರು ಎಲ್ಲ ರೀತಿಯ ಜನ ಅಲ್ಲಿದ್ದರು.

ಥೇಲೀಸ್ ಆಲೀವ್ ಎಣ್ಣೆಗೆ, ಒಳ್ಳೆಯ ಬೇಡಿಕೆ. ನೇರವಾಗಿ ಥೀಬ್ಸ್ ಪಟ್ಟಣಕ್ಕೆ ಹೋಗಲು ಅಪ್ಪಣೆ ಸಿಕ್ಕಿತು. ಅಲ್ಲಿಗೇ ಹೋಗಲಿ ನಿಮ್ಮ ಉತ್ಕೃಷ್ಟ ಎಣ್ಣೆಯ ಸರಕು ಎಂದಿದ್ದರು ರಾಜದೂತರು.



ಥೀಬ್ಸ್ ದೇವಾಲಯಗಳ ನಗರ. ಅಲ್ಲಿದ್ದವೆಲ್ಲಾ ದೈತ್ಯ ವಿಗ್ರಹಗಳು ಅತಿ ಎತ್ತರದ ಕಂಬಗಳು. ಪಯೋ ನೋಡುತ್ತಾ ದಂಗುಬಡಿದು ಹೋದ. ಇಷ್ಟು ಭಾರೀ ಕಟ್ಟಡಗಳನ್ನು ಕಟ್ಟುವ ಜನ ಮತ್ತೊಂದು ಪ್ರಪಂಚವನ್ನೇ ಕಟ್ಟಬಲ್ಲರು ಎಂದುಕೊಂಡ.

ಅಲ್ಲಿನ ಮುಖ್ಯ ಪುರೋಹಿತರೊಂದಿಗೆ ಥೇಲೀಸ್ ಸಂಭಾಷಣೆ ನಡೆಸಿದ. ಅವರಿಗೆ ಥೇಲೀಸ್‌ನ ಗಣಿತದ ಬಗ್ಗೆ ಅಭಿಮಾನ ಮೂಡಿತು. ಸಾವಿನ ಕಣಿವೆಗೆ ಹೋಗಲು ಪರವಾನಗಿ ಸಿಕ್ಕಿತು.

ಧನ್ಯ ಎಂದುಕೊಂಡ ಥೇಲೀಸ್. ತಾನು ಕೆಲವು ಜ್ಯಾಮಿತೀಯ ಆಕೃತಿಗಳ ಬಗ್ಗೆ ತಲೆ ಕೆಡಿಸಿಕೊಂಡಿದ್ದರೆ, ಈ ಜನ ಘನಾಕಾರಗಳ ಬಗ್ಗೆ ನಿಖರವಾಗಿ ಲೆಕ್ಕಚಾರ ಮಾಡುತ್ತಿದ್ದರು. ಒಬ್ಬೊಬ್ಬ ರಾಜನೂ ಹಿಂದಿನವ ಕಟ್ಟಿಸಿದ ಪಿರಮಿಡ್‌ಗಳಿಗಿಂತ ಹಿರಿದಾದ ಪಿರಮಿಡ್ ಕಟ್ಟಬಯಸುತ್ತಿದ್ದ. ಅಂದರೆ ಕಟ್ಟುವ ಮೊದಲೇ ಅವರಿಗೆ ತಾವು ನಿರ್ಧರಿಸಿದ ಗಾತ್ರದ ಅರಿವಿರಲೇಬೇಕೆಂದು ತರ್ಕಿಸಿದ ಥೇಲೀಸ್.

ಆದರೆ ಭಾಷೆಯ ತೊಡಕು. ಸಾವಿನ ಕಣಿವೆಯು ನಿರ್ಜನ ಪ್ರದೇಶ. ಜನರು, ನಗರಗಳು, ಗಣಿತಜ್ಞರು ಇದ್ದುದೆಲ್ಲಾ ನೈಲ್ ನದಿಯ ದಡದಲ್ಲಿ. ಸಾವಿನ ಕಣಿವೆಗೂ ಅದಕ್ಕೂ 700 ಮೈಲಿಗಳ ದೂರ. ಹಾಗಾಗಿ ಪಿರಮಿಡ್‌ಗಳ ಎತ್ತರ ಎಷ್ಟು ಎಂದು ಯಾರನ್ನೂ ಕೇಳಿದರೂ ಉತ್ತರಿಸುವವರಿಲ್ಲ. ಥೇಲೀಸ್, ಪಯೋರಿಗೆ ಇದು ಸಮಸ್ಯೆಯಾಯಿತು.

ಅಂದೊಂದು ದಿನ. ತ್ರಿಭುಜಗಳ ಬಗ್ಗೆ ಇಬ್ಬರೂ ಚರ್ಚಿಸುತ್ತಿದ್ದರು. ಬಟ್ಟೆಯ ಮೇಲೆ ಥೇಲೀಸ್ ಒಂದು ತ್ರಿಭುಜ ಬರೆದ. ಪಯೋ ಅದನ್ನು ನೋಡಿ ಅದೇ ತರಹ ತಾನೂ ಬಟ್ಟೆಯೊಂದರ ಮೇಲೆ ಬರೆದುಕೊಂಡ. ಥೇಲೀಸ್ ಬರೆದ ತ್ರಿಭುಜ ಹೀಗಿತ್ತು....



"ನೋಡು ಎರಡೂ ಬಾಹುಗಳ ಉದ್ದ 25 ಮಾನಗಳು. ಇದರ ಎತ್ತರವನ್ನು ಕಂಡುಹಿಡಿದು, ವಿಸ್ತೀರ್ಣವನ್ನು ಹೇಳು" ಎಂದ ಥೇಲೀಸ್.

ಪಯೋ ಥೇಲೀಸ್‌ನ ಎದುರು ಕುಳಿತಿದ್ದ. ಚಿತ್ರ ಸರಿಯಾಗಿ ಕಾಣಲಿಲ್ಲವೇನೋ "ಸ್ವಾಮಿ ನಿಮ್ಮ ತ್ರಿಭುಜದ ವಿಸ್ತೀರ್ಣ ಎಷ್ಟು" ಎಂದ.

"ನನ್ನದು 300 ಚದರ ಮಾನಗಳು" ಎಂದ ಥೇಲೀಸ್.

"ಸರಿ ಎಂದು ಪಯೋ ರಚಿಸಿದ ಚಿತ್ರ ಹೀಗಿತ್ತು.




"ನನ್ನ ತ್ರಿಭುಜದ ವಿಸ್ತೀರ್ಣವೂ ಅಷ್ಟೇ 300" ಎಂದ ಪಯೋ.

"ಸರಿ ನಿನ್ನ ತ್ರಿಕೋನದ ಪರಿಧಿ ಎಷ್ಟು? ನನ್ನದು 90" ಎಂದ ಥೇಲೀಸ್.

"ಅದು ಹೇಗೆ ಸ್ವಾಮಿ. ನನ್ನ ತ್ರಿಭುಜದ ಪರಿಧಿ 80" ಎಂದ.

ಇಬ್ಬರೂ ಮತ್ತೊಬ್ಬರ ತ್ರಿಭುಜದ ಚಿತ್ರಗಳನ್ನು ನೋಡಿಕೊಂಡರು.

"ಇಲ್ಲೊಂದು ಸೋಜಿಗ ನೋಡು ಪಯೋ. ಸುತ್ತಳತೆ ಬೇರೆ ಬೇರೆ. ಆದರೆ ವಿಸ್ತೀರ್ಣ ಒಂದೇ" ಎಂದು ಖುಷಿಪಟ್ಟ ಥೇಲೀಸ್.

"ಹ್ಞಾ! ಹೌದಲ್ಲ ಮಹಾಶಯರೇ" ಎಂದು ಆಶ್ಚರ್ಯಗೊಂಡ ಪಯೋ.

"ಇದನ್ನು ಬೇರೊಂದು ರೀತಿಯಲ್ಲಿ ನೋಡಲು ಸಾಧ್ಯವೇ ಯೋಚಿಸು. ಇಲ್ಲಿನ ಅಂಶಗಳನ್ನು ತಿರುಗ ಮುರುಗ ಮಾಡಿದರೆ ಹೇಗೆ? ಅಂದರೆ ಸುತ್ತಳತೆ ಒಂದೇ ವಿಸ್ತೀರ್ಣಗಳು ಬೇರೆ ಬೇರೆ ಅಥವಾ ಕೋನಗಳು ಒಂದೇ. ಬಾಹುಗಳ ಅಳತೆ ಬೇರೆ ಬೇರೆ" ಒಂದೇ ಉಸಿರಿಗೆ ಥೇಲೀಸ್ ಕೈಸನ್ನೆ ಮಾಡುತ್ತಾ ಹೇಳಿದ.

ಇದೇ ಮೇಧಾವಿಗಳು ಯೋಚಿಸುವ ರೀತಿ. ಒಂದರ ಜಾಡು ಹಿಡಿದರೆ ಬುಡಮಟ್ಟ ಅಲ್ಲಾಡಿಸುತ್ತಾರೆ ಎಂದುಕೊಂಡ ಪಯೋ.



"ಪಯೋ ಇಲ್ಲೊಂದು ತ್ರಿಕೋನ ರಚಿಸಿದ್ದೇನೆ. ಇದೇ ಕೋನಗಳಿರುವಂತೆ ನೀನೊಂದು ತ್ರಿಭುಜ ರಚಿಸು" ಎಂದ ಥೇಲೀಸ್.

ಪಯೋ ರಚಿಸಿದ. ಪಯೋನದು ಚಿಕ್ಕದು. ಥೇಲೀಸ್‌ನದು ದೊಡ್ಡದು. ಇಲ್ಲಿ ಕೋನಗಳು ಒಂದೇ ಬಾಹುಗಳು ಭಿನ್ನ.



ಥೇಲೀಸ್‌ನದು ದೊಡ್ಡದು, ಪಯೋನದು ಚಿಕ್ಕದು ಕೋನಗಳ ಒಂದೇ, ಬಾಹುಗಳ ಭಿನ್ನ ಅಳತೆ.

"ನೋಡು ಪಯೋ. ಇವೆರಡರ ಸಂಬಂಧ ಏನು? ಯೋಚಿಸು" ಎಂದ ಥೇಲೀಸ್.

"ಇದನ್ನು ಒಂದರ ಮೇಲೊಂದು ಇರಿಸು" ಎಂದ ಥೇಲೀಸ್.



"ಆಹಾ! ಈಗ ನೋಡು. ಇವೆರಡೂ ದೂರ ಇದ್ದಾಗ ಹೊಳೆಯದಿದ್ದರು ಈಗ ಕಾಣುತ್ತದೆ" ಎಂದ.

"ಅದೇನು ಕಂಡಿತು ಸ್ವಾಮಿ" ಎಂದ ಪಯೋ.

ಥೇಲೀಸ್ ಬೇರೊಂದು ಲಿನೆನ್ ಚೂರನ್ನು ತೆಗೆದುಕೊಂಡು ಬರೆಯತೊಡಗಿದ.

"ಇದು ನೋಡು, ಒಂದೇ ಬಿಂದುವಿನಿಂದ ಹೊರಟ. ಎರಡು ಸರಳ ರೇಖೆಗಳು ಇವು. ಇಲ್ಲಿ ಕೋನವನ್ನು ರಚಿಸುತ್ತವೆ.



ಇಲ್ಲಿ ಮೇಲಿನ ರೇಖೆಗಳು ಸಮಾಂತರದಲ್ಲಿ ಬಿಂದುಗಳನ್ನು ಗುರ್ತಿಸು.




ನಂತರ ಈ ಬಿಂದುಗಳಿಂದ ತಳದ ರೇಖೆಗಳ ಲಂಬಗಳನ್ನು ಎಳೆ. ಹಾಗೆಯೇ ಇದೇ ಬಿಂದುಗಳಿಂದ ತಳರೇಖೆಗೆ ಸಮಾಂತರ ರೇಖೆಗಳನ್ನು ಎಳೆ. ಆಗ ಅದು ಹೀಗೆ ಕಾಣುತ್ತದೆ.




ಈಗ ನೋಟ ಸ್ಪಷ್ಟ. ಈ ಲಂಬರೇಖೆಗಳ ಎತ್ತರ ಹೆಚ್ಚುತ್ತಾ ಹೋಗುತ್ತಿದೆ ಮತ್ತು ಯಾವುದೇ ಅಕ್ಕಪಕ್ಕದ ಎರಡು ಲಂಬರೇಖೆಗಳ ಎತ್ತರದ ಅನುಪಾತ ಒಂದೇ" ಎಂದ ಥೇಲೀಸ್.

ಇದೇ ತರ್ಕವನ್ನು ಮುಂದುವರೆಸಿ, ನಾವು ಬರೆದ ಹಿಂದಿನ ತ್ರಿಭುಜಗಳ ಬಾಹುಗಳ ಒಂದೇ ಅನುಪಾತದಲ್ಲಿದ್ದು ಸಮನಾಗಿದೆ ಎನ್ನುವುದು ಹೇಗೆ" ಎಂದ ಪಯೋ.

"ನೋಡು ಪಯೋ ಯಾವುದೇ ತ್ರಿಭುಜದ ಎಲ್ಲಾ ಕೋನಗಳ ಮೊತ್ತ ಎಷ್ಟು" 180 ಡಿಗ್ರಿ ಸ್ವಾಮಿ" ಎಂದ ಪಯೋ.



"ಹಾಗಾಗಿ ಒಂದು ಕೋನ ಜಾಸ್ತಿಯಾದರೆ ಮತ್ತೆರಡು ಅದೇ ರೀತಿಯಲ್ಲಿ ಕಮ್ಮಿಯಾಗಬೇಕಾಗುತ್ತದೆ. ಆದ್ದರಿಂದ ಆಯಾ ಸಮಕೋನಗಳ ಅಭಿಮುಖ ಬಾಹುಗಳ ಅನುಪಾತ ಸಮನಾಗಿರಲೇಬೇಕು" ಎಂದ ಥೇಲೀಸ್.

ಹೀಗೆಯೇ ಸಾಗಿತು ಮಾತು. ಬೆಳಗಾಗದ್ದು ತಿಳಿಯಲೇ ಇಲ್ಲ. ಇವರ ಬಿಡಾರವಿದ್ದದ್ದು ಖೇಯೋಪ್ಸ್ ಪರಿಮಿಡ್‌ನ ಪಕ್ಕದಲ್ಲಿ, ಮುಂಜಾನೆಯ ಬೆಳಕಿನಲ್ಲಿ ಪರಿಮಿಡ್‌ನ ನೆರಳು ಬಹುದೂರಕ್ಕೆ ಚಾಚಿತ್ತು.

"ಪಯೋ ಏಳು ಬೇಗ, ಪಿರಮಿಡ್‌ನ ನೆರಳು ನೋಡು ಈಗ ಪಿರಮಿಡ್‌ನ ಎತ್ತರ ಕಂಡು ಹಿಡಿಯುವುದು ಸುಲಭವಲ್ಲವೇ" ಎಂದ ಥೇಲೀಸ್.

"ಮಹಾಶಯರೇ, ನೆರಳಿಗೂ ಎತ್ತರಕ್ಕೂ ಹೇಗೆ ಸಂಬಂಧ? ನನ್ನ ಅಜ್ಞಾನ ಒಂದೆಡೆ ಇರಲಿ. ನೆರಳು ಆ ಕಡೆಗಿದೆಯಲ್ಲಾ ನಾವು ಆ ಕಡೆಗೆ ತೆರಳೋಣವೇ" ಎಂದು ಮೇಲೆದ್ದ ಪಯೋ.

"ನಿದ್ದೆಯ ಮಂಪರಿದೆಯೇನು ನಿನಗೆ? ನಾವೇಕೆ ನೆರಳಿನ ಹಿಂದೆ ಓಡಬೇಕು. ಪಶ್ಚಿಮಕ್ಕೆ ಸೂರ್ಯ ಸರಿದಾಗ ಪಿರಮಿಡ್‌ನ ನೆರಳು ಈ ಕಡೆ ಬಾರದೇ" ಎಂದ ಥೇಲೀಸ್. ಪಯೋಗೆ ಏನರ್ಥವಾಯ್ತೋ ಏನೋ. ಅವನು ತಲೆ ಅಲ್ಲಾಡಿಸುತ್ತಾ, ತಾನು ಹಾಸಿದ್ದ ಚಾಪೆ ಸುತ್ತುತ್ತಾ ಹ್ೂ ಗುಟ್ಟಿದ.

ಅಲ್ಲೇ ಈಚಲು ಮರದ ಕೆಳಗಡೆ ಪಿರಮಿಡ್‌ನ ಪಕ್ಕದಲ್ಲೇ ಸಂಜೆ 4 ಗಂಟೆಯವರೆಗೂ ಇಬ್ಬರೂ ಕಾದರು.

ನಂತರ ಥೇಲೀಸ್ ಹೆಜ್ಜೆಯ ಲೆಕ್ಕ ಹಾಕುತ್ತಾ ಪಿರಮಿಡ್‌ನ ಮಧ್ಯದಿಂದ, ನೆರಳಿನ ಗುಂಟ ನಡೆಯತೊಡಗಿದ. ಒಮ್ಮೆಗೆ ಒಂದೇ ಹೆಜ್ಜೆಯೂರಿ, ತನ್ನ ಊರು ಬೆತ್ತ ಅದುಮಿ ಹಿಡಿದು ಮತ್ತೊಂದು ಹೆಜ್ಜೆಯಿಡುವ ತಾಳಬದ್ಧ ರೀತಿ ನೋಡಿ ಪಯೋ ಮಾತಿಲ್ಲದೆ ಹಿಂಬಾಲಿಸುತ್ತಿದ್ದ.



ಥೇಲೀಸ್ ತನ್ನ ಬೆತ್ತದ ಹಿಡಿಯ ಮೇಲೆ ಬೆಳಕು ಬೀಳುವ ಜಾಗದಲ್ಲಿ ನಿಂತ. ಅಂಗೈ ಅರಳಿಸಿ 2560 ಮೊಳ ಎಂದು ಗುರುತು ಹಾಕಿಕೊಂಡ ಮತ್ತೆ ನಡೆದು ಪಿರಮಿಡ್‌ನ ಚೂಪು ನೆರಳು ಕಾಣುವವರೆಗೆ ಉಸ್ಸಪ್ಪ ಎಂದು ಕುಳಿತ. ಈ ಉದ್ದ 16 ಮೊಳ ಎಂದು ಗುರ್ತಿಸಿಕೊಂಡ.

"ಬಾ ಪಯೋ ಇಲ್ಲಿ ನೋಡು ಎಂದ ಥೇಲೀಸ್ ಮರಳಿನ ಮೇಲೆ ಹೀಗೆ ಬರೆದಿದ್ದ"

$$\frac{AB}{DE} = \frac{BC}{CE}$$

ಇಲ್ಲಿ DE = 1 ಮೊಳ

$$\frac{BC}{CE} \times DE = \frac{2560}{16} \times 1 = 160 \text{ ಮೊಳ}$$

ABC ಮತ್ತು DEC ಗಳೆರಡೂ ಸಮರೂಪ ತ್ರಿಭುಜಗಳು ನಿನ್ನ ಜೊತೆಗಿನ ಸ್ನೇಹ ಎಷ್ಟು ಫಲಪ್ರದ ನೋಡು. ನಿನ್ನೆಯ ಚರ್ಚೆಯಿಂದ ಈ ಪಿರಮಿಡ್‌ನ ಎತ್ತರ ಕಂಡುಹಿಡಿಯುವುದು ಹೇಗೆಂದು ಹೊಳೆಯಿತು–ಎಂದು ಥೇಲೀಸ್ ನಕ್ಕ.

ಪಯೋ ನಗಲಿಲ್ಲ ಅವನು ಮೂಕನಾಗಿ ಅಸ್ತಮಿಸುತ್ತ ನೆರಳು ಮೂಡಿಸಿದ ಸೂರ್ಯನನ್ನು ನೋಡಿದ ಅದೇ ಸೂರ್ಯನ ಪ್ರಖರ ಪ್ರಭೆಯನ್ನು ಥೇಲೀಸ್‌ನ ನಗುಮುಖದಲ್ಲಿ ಕಂಡ.

***************





ಮುಗಿಯಿತೇ......

ನೋಡೋಣ......